# ತಪೋಬಲ

ಲೇಖಕ :— ಶ್ರೀ॥ "ಶಿವ"

ಮುನ್ನುಡಿಯ ಲೇಖಕರು
**ಬೆನಗಲ್ ರಾಮರಾವ್** ಎಂ.ಎ., ಎಲ್.ಎಲ್.ಬಿ.
ಗವರ್ನಮೆಂಟ್ ಸೀನಿಯರ್ ಟ್ರಾನ್ಸ್‌ಲೇಟರ್, ಮದರಾಸು.



1928

PRINTED AND PUBLISHED BY
B. SREENIVASA IYENGAR
BANGALORE CITY

**ಬೆಲೆ ೧-೪-೦**

# ಮುನ್ನುಡಿ

---

ಅರ್ವಾಚೀನ ಕರ್ಣಾಟ ವಾಙ್ಮಯವು, ಮುಖ್ಯವಾಗಿ ಅದರ ಗದ್ಯ ಮತ್ತು ರೂಪಕ ಶಾಖೆಗಳು, ಆಧುನಿಕ ವಂಗಸಾಹಿತ್ಯಕ್ಕೆ ಚಿರಋಣಿಯಾಗಿ ನಿಂತಿರುವುವು. ಈ ಭಾಗದಲ್ಲಿ ಕೃಷಿಮಾಡಿದವರೊಳಗೆ ದಿವಂಗತ ಶ್ರೀಮಾನ್ ಬಿ. ವೆಂಕಟಾಚಾರ್ಯರವರೇ ಮೊತ್ತಮೊದಲಿನವರು. ಇವರ ಮಾರ್ಗವನ್ನನುಸರಿಸಿ ಭಾಷಾಭಿಮಾನಿಗಳಾದ ಇನ್ನು ಎಷ್ಟೋ ಮಂದಿ ಲೇಖಕರು ಉತ್ತಮೋತ್ತಮವಾದ ಬಂಗಾಳೀ ವಚನ ಪ್ರಬಂಧಗಳನ್ನು ಕನ್ನಡಕ್ಕೆ ಪರಿವರ್ತಿಸಿ ವಂಗದೇಶೀಯ ನೂತನ ಲೇಖನಪದ್ಧತಿಯ ಮಾಧುರ್ಯವನ್ನು ಕನ್ನಡಿಗರು ಸವಿಯುವಂತೆ ಮಾಡಿ ನಮ್ಮೆಲ್ಲರ ಕೃತಜ್ಞತೆಗೆ ಪಾತ್ರರಾಗಿರುವರು.

ಇದಾದ ಕೆಲವುಕಾಲದ ಬಳಿಕ ಶ್ರೇಷ್ಠರಾದ ವಂಗನಾಟಕಕಾರರ ನಾಟಕಗಳೂ ಕನ್ನಡಕ್ಕೆ ಭಾಷಾಂತರವಾಗಿ ಬರಲು ಪ್ರಾರಂಭವಾಯಿತು. ಸಾರ್ವದೇಶೀಯ ಕೀರ್ತಿ ಮಂಡಿತರಾದ **ರವೀಂದ್ರನಾಥ ಠಾಕೂರ, ದ್ವಿಜೇಂದ್ರಲಾಲ ರಾಯ, ಗಿರೀಶಚಂದ್ರ ಘೋಷ, ಅಮೃತಲಾಲ ವಸು, ಮಧುಸೂದನ ದತ್ತ** ಮುಂತಾದ ಲೇಖಕರುಗಳ ಅಮೌಲ್ಯವಾದ ಕೆಲಕೆಲವು ನಾಟಕಗಳು ಈಗ ಕರ್ಣಾಟಕ ವಾಙ್ಮಯ ಪ್ರಪಂಚವನ್ನು ಪ್ರವೇಶಿಸಿ ನಮ್ಮ ರೂಪಕಸಾಹಿತ್ಯದಲ್ಲಿ ಅದ್ಭುತವಾದ ಕ್ರಾಂತಿಯನ್ನುಂಟು ಮಾಡಿರುವುವು; ಮತ್ತು ಕಲ್ಪನಾ ಪ್ರಬಂಧಗಳ ವಿಷಯದಲ್ಲಿ ಹೇಗೋ ಈ ಭಾಗದಲ್ಲಿಯೂ ಹಾಗೆಯೇ ಅನನ್ಯಸಾಧಾರಣ ಪ್ರತಿಭಾಶಾಲಿಗಳಾದ ಲೇಖಕರು ನಮ್ಮಲ್ಲಿಯೂ ನಿರ್ಮಾಣವಾಗಲು ಕಾರಣಭೂತಗಳಾಗಿ ಪರಿಣಮಿಸಿವೆ.

ಅಮೋಘವಾದ ಇಂತಹ ವಂಗರೂಪಕಗಳನ್ನು ಕನ್ನಡಿಸಿದವರೊಳಗೆ ವಿಶ್ವವಿದ್ಯಾಲಯದ ಪದವೀಧರರೂ ಈ '**ತಪೋಬಲ**'ದ ಪರಿವರ್ತಕರೂ ಆದ ಶ್ರೀಯುತ "**ಶಿವ**" ಅವ

ರೂ ಒಬ್ಬರಾಗಿರುವರು. ಸನ್ಮಾನ್ಯ ಭಾಷಾಸೇವಕರೂ ಬಹುಕಾಲದಿಂದ ನನ್ನ ಆಪ್ತಮಿತ್ರರೂ "**ಕರ್ಣಾಟಕ ರಂಗಭೂಮಿ**" ಯ ಸಂಪಾದಕರೂ ಆದ ಶ್ರೀಮಾನ್ ದ. ಕೃ ಭಾರದ್ವಾಜರ ಮೂಲಕ ಇವರಿಗೂ ನನಗೂ ಪರಿಚಯವುಂಟಾಗಿದೆ, ಮತ್ತು ನೂತನವಾಗಿ ಸಾಹಿತ್ಯರಂಗದಲ್ಲಿ ಪದಾರ್ಪಣವನ್ನು ಮಾಡಲು ಹವಣಿಸುತ್ತಿರುವ ಇವರಿಗೆ ಈ **ಮುನ್ನುಡಿಯು** ರೂಪವಾಗಿ ಹಸ್ತಾವಲಂಬನವನ್ನು ಕೊಡಬೇಕೆಂದು ಮಾಡಿದ ನನ್ನ ಮಿತ್ರರ ಆಜ್ಞೆಯನ್ನು ಶಿರಸಾವಹಿಸಿ, ಅಂತಹ ವಿಶೇಷವಾದ ಪ್ರತಿಭೆಯೂ ಯೋಗ್ಯತೆಯೂ ನನ್ನಲ್ಲಿಲ್ಲವೆಂಬುದನ್ನು ನಾನೇ ಅರಿತಿರುವೆನಾದರೂ, ಪ್ರೋತ್ಸಾಹಕಾರಿಯಾಗಿರಲೆಂಬ ಸದುದ್ದೇಶದಿಂದ ಇದನ್ನು ಬರೆದಿರುವೆನು.

ಈ ನಾಟಕದ ನಿರ್ಮಾಣ ಕೌಶಲವನ್ನೂ ಇದರಿಂದ ಪಾಠಕರ ಮನಸ್ಸಿನ ಮೇಲೆ ಉಂಟಾಗತಕ್ಕ ಸುಪರಿಣಾಮವನ್ನೂ ಕುರಿತು ನಾನು ಪ್ರತ್ಯೇಕವಾಗಿ ಬರೆಯುಬೇಕಾದ್ದಿಲ್ಲವು. ತಥಾಪಿ–

"To will well, to will long, to will always, and never to lust after anything, such is the secret of power."

"The more we restrain ourselves for an idea the greater is the strength we acquire within the scope of that idea."

"Two things are necessary for the progress that we seek : the declaration of a principle and its incarnation in action."

"Heat conserved is transmitted into energy; so also our anger, conserved and controlled, can result in a power that becomes irresistable throughout the world."—

ಎಂಬಿವೇ ಮುಂತಾದ ಯಾವ ಮಹಾ ವಾಕ್ಯಗಳನ್ನು ನಾನು ನನ್ನ ಆದರ್ಶಗಳನ್ನಾಗಿ ಇಟ್ಟುಕೊಂಡಿರುವೆನೋ ಅವೆಲ್ಲ ಈ ರೂಪಕ ರಚನೆಯ ಮೂಲವಾಗಿ ನಮ್ಮ ಪ್ರತ್ಯಯಕ್ಕೆ ಬರುತ್ತವೆಂಬ ವಿಷಯವನ್ನು ನಾನು ಈ ಸಂದರ್ಭದಲ್ಲಿ ಹೇಳದಿರಲಾರೆನು.

ಇನ್ನು ಇಷ್ಟು ಗಂಭೀರವಾದ ವಾಕ್ಯರಚನೆಯೂ, ಉದಾತ್ತವಾದ ವಿಚಾರಸರಣಿಯಿಂದ ಕೂಡಿರುವ ಉದ್ದುದ್ದವಾದ ಸಂಭಾಷಣೆಗಳೂ, ಪ್ರಾಯಶಃ ತೋರಿಸಲು ದುಸ್ಸಾಧ್ಯವೆನ್ನತಕ್ಕ ದೃಶ್ಯಗಳೂ ಇರುವ ಈ ತರಗತಿಯ ನಾಟಕಗಳನ್ನು ರಂಗಭೂಮಿಯಲ್ಲಿ ಆಡಿ ಪ್ರದರ್ಶಿಸುವುದು ಶಕ್ಯವೇ ಎಂಬ ಸಂದೇಹವು ಅನುಭವಶಾಲಿಗಳಾದ ಕೆಲಕೆಲವರಿಗೆ ಉಂಟಾಗಬಹುದು. ಆದರೆ ನಾಟಕಗಳು ಪ್ರದರ್ಶನಕ್ಕೆ ಮಾತ್ರವೇ ಅಲ್ಲದೆ ಪಠನಕ್ಕೂ ಉಪಯೋಗವಾಗುವುದರಿಂದ ಪರಿಣಾಮಕಾರಿಗಳಾಗಬೇಕಾದರೆ ಪ್ರದರ್ಶನ ಕಾಲದಲ್ಲಿ ಬೇಕಾಗುವುದಕ್ಕಿಂತ ಅಧಿಕ ಗಹನವಾದ ವಿಷಯಗಳು ಅವುಗಳಲ್ಲಿ ಇರಬೇಕಾದುದು ಅಗತ್ಯವೆಂಬುದನ್ನು ನಾವು ಮರೆಯತಕ್ಕುದಲ್ಲ. ಇದಲ್ಲದೆ, ಪ್ರದರ್ಶನ ಕಾಲದಲ್ಲಿ ಯಾವ ಯಾವ ಭಾಗಗಳನ್ನು ಮಾತ್ರ ಆಡಿ ತೋರಿಸಬೇಕೆಂಬುದನ್ನು, ನಾಟಕ ಮಂಡಲಿಗಳ ಅಧ್ಯಕ್ಷರುಗಳು ತಿಳಿದೇ ಇರುವರಾದುದರಿಂದ ಇದೊಂದು ಪ್ರಬಲವಾದ ಆಕ್ಷೇಪಣೆಯೆಂದು ತಿಳಿಯಬೇಕಾದುದಿಲ್ಲ.

ಈ ಪುಸ್ತಕವನ್ನು ಕನ್ನಡಿಸುವಲ್ಲಿ ಲೇಖಕರು ಸರಳವೂ ಪಂಡಿತ ಸಮ್ಮತವೂ ಆದ ಭಾಷೆಯನ್ನು ಉಪಯೋಗಿಸಿರುವರೆಂಬುದನ್ನು ವಾಚಕರು ತಾವಾಗಿಯೇ ಕಂಡು ಹಿಡಿಯಬಲ್ಲರು. ಮುಖ್ಯವಾಗಿ, ಭಾಷಾಭಿಮಾನಿಗಳಾದ ಕರ್ಣಾಟ ಮಹಾಜನರುಗಳೂ ವಿಶ್ವವಿದ್ಯಾಲಯಗಳ ಅಧಿಕಾರಿಗಳೂ ಈ ಪುಸ್ತಕವನ್ನು ಪರಿಶೀಲಿಸಿಯೂ ಪಾಠ ಗ್ರಂಥವನ್ನಾಗಿ ಏರ್ಪಡಿಸಿಯೂ ಪರಿವರ್ತಕರ ಶ್ರಮವನ್ನು ಸಾರ್ಥಕಗೊಳಿಸಿ ಅಧಿಕಾಧಿ

ಕವಾಗಿ ಲೇಖನ ವ್ಯವಸಾಯವನ್ನು ಮಾಡುವಂತೆ ಅವರನ್ನು ಪ್ರೋತ್ಸಾಹಗೊಳಿಸುವರೆಂದು ನಂಬಿದ್ದೇನೆ.

ಇತಿ,

೨೪ನೆ ಏಪ್ರಿಲ್ ೧೯೨೮ | ಮದ್ರಾಸು. | ಸಕಲ ಸಜ್ಜನ ವಿಧೇಯ, **ಬೆನಗಲ್ ರಾಮರಾವ್,** ಮದ್ರಾಸು.

# ಒಂದೆರಡು ಮಾತುಗಳು.

**ಈ** ಪುಸ್ತಕವು ಬಂಗಾಳಿ ಗ್ರಂಥದ ಅನುವಾದವು. ಮೂಲ ಲೇಖಕರು ಸುಪ್ರಸಿದ್ಧ ವಂಗೀಯ ನಾಟಕ ಕರ್ತರಾದ ಗಿರೀಶ ಚಂದ್ರಘೋಷರು. ಇವರು ಲೇಖಕರು ಮಾತ್ರವಲ್ಲ, ಸುಪ್ರಸಿದ್ಧ ನಟರೂ ಆಗಿದ್ದರು. ಅವರ ನಾಟಕಗಳಲ್ಲಿ ಇದಕ್ಕೆ ಅಗ್ರಸ್ಥಾನವು ದೊರೆತಿದೆ. ನಾಟಕ ವಿಷಯವು ಪ್ರಾಚೀನ ಕಾಲದ್ದಾದರೂ, ಅದರೊಳಗಣ ವಿಷಯಗಳೆಲ್ಲವೂ ಈಗಿನ ಕಾಲಕ್ಕೆ ಸಂಬಂಧಿಸುವಂತಿವೆ. ಆದುದರಿಂದ ಕನ್ನಡ ನುಡಿಯ ಮತ್ತು ಸಮಾಜದ ಸೇವೆಯು ಲಭಿಸಿದಂತಾಗುವುದೆಂದು ಇದನ್ನು ಅನುವಾದಿಸಿ ಕನ್ನಡಿಗರ ಮುಂದಿರಿಸಿರುವೆನು. ಇದನ್ನು ಓದುವ ಪಾಠಕರಿಗೆ ಮನೋರಂಜನೆಯೂ ಹಿತವೂ ಆಗುವುದಾದರೆ ನನ್ನ ಶ್ರಮವು ಸಾರ್ಥಕವಾಯಿತೆಂದು ಭಾವಿಸುವೆನು.

ಕನ್ನಡ ನಾಡಿನ ಮುದ್ರಾಲಯಗಳಲ್ಲಿ ಮುದ್ರಾರಾಕ್ಷಸನ ಕಾಟವು ತಪ್ಪಿಲ್ಲ. ಆದುದರಿಂದ ಈ ಪುಸ್ತಕ ಮುದ್ರಣದಲ್ಲಿ ಅವನ ಕಾಟವನ್ನು ತಪ್ಪಿಸಿಕೊಳ್ಳಲಾಗಲಿಲ್ಲ. ಪುಸ್ತಕಕ್ಕೆ ತಕ್ಕ ಆದರವು ದೊರೆತರೆ ಮುಂದಣ ಮುದ್ರಣದಲ್ಲಿ ಎಲ್ಲ ಕೊರತೆಗಳನ್ನು ಸರಿಪಡಿಸಬೇಕೆಂಬ ಆಸೆಯಿದೆ.

ಇದನ್ನು ಮೊದಲು “ **ರಂಗಭೂಮಿ** ” ಮಾಸಪತ್ರಿಕೆಯಲ್ಲಿ ಪ್ರಕಟಿಸಿದುದಕ್ಕಾಗಿ ಅದರ ಸಂಪಾದಕರಿಗೂ, ಪ್ರಕಾಶಕರಿಗೂ ಇದಕ್ಕೆ ಈ ಪುಸ್ತಕ ರೂಪವನ್ನು ಕೊಟ್ಟು ಪ್ರಕಟಿಸಿರುವ ಶ್ರೀ॥ ಬಿ. ಶ್ರೀನಿವಾಸಯ್ಯಂಗಾರ್ಯರಿಗೂ ನನ್ನ ವಂದನೆಗಳು.

ಇತಿ—“ **ಶಿವ** ”

# ಶುದ್ಧಾಶುದ್ಧಪತ್ರಿಕೆ.

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೧೫ | ೧೬ | ಬ್ರಾಹ್ಮಣರಿಗೆ ಜನ್ಮಜನನ | ಬ್ರಾಹ್ಮಣರಿಗೆ ಜನನ |
| ೧೬ | ೩ | ಭಯಪಟ್ಟಿರುವರುವರು | ಭಯಪಟ್ಟಿರುವರು |
| ,, | ೨೦ | ಮಹಾರಾಜ ವಿಶ್ವಾಮಿತ್ರ | ಮಹಾರಾಜ! ವಿಶ್ವಾಮಿತ್ರ |
| ೧೯ | ೧೦ | ತಪಜಪ | ಜಪತಪ |
| ೨೨ | ೪ | ಆಗಲಾದರೂ | ಆಗತಾನೆ |
| ೨೩ | ೩ | ಮೃಗವೇನು ? | ಮೃಗವೇ ? |
| ೨೪ | ೧೨ | ಹೊಟ್ಟೆಯುಲ್ಲಿ | ಹೊಟ್ಟೆಯಲ್ಲಿ |
| ,, | ೨೦ | ಬ್ರಾಹ್ಮಣಸ | ಬ್ರಾಹ್ಮಣನ |
| ೨೫ | ೨೧ | ತಪಃಭಾವದಿಂದ | ತಪಃಪ್ರಭಾವದಿಂದ |
| ೨೯ | ೨ | ಬ್ರಹ್ಮತೇಜಸ್ಸನ್ನು | ತೇಜಸ್ಸನ್ನು |
| ೩೦ | ೪ | ಗೌರವಸ್ತನಾಗಿ | ಗೌರವದಿಂದ |
| ೩೧ | ೨೨ | ಷೋಡೋಪಚಾರ | ಷೋಡಶೋಪಚಾರ |
| ೩೨ | ೩ | ಮಾಡಿಕೊಡು | ಮಾಡಿಕೊಂಡು |
| ೩೩ | ೧೮ | ನೀನೂ | ನೀನು |
| ೪೦ | ೧೦ | ತಪಸ್ವಿಯು | ತಪಸ್ವಿಯು ಇವನ್ನು |
| ೫೫ | ೫ | ನಿನಗೇನಾಗದೇಕು | ನಿನಗೇನಾಗಬೇಕು ? |
| ೫೬ | ೧೯ | ಕೊನೆಗೆ ಉಳಿದರಾಕ್ಷಸನ | ಕೊನೆಗೆ ರಾಕ್ಷಸನ |
| ೬೩ | ೧೨ | ಅಭಿಷ್ಟಸಾಧನೆಯಲ್ಲಿ | ಅಭೀಷ್ಟಸಾಧನೆಯಲ್ಲಿ |
| ೬೫ | ೧೪ | ಬ್ರಾಹ್ಮಣನಾಗಲೇತ್ನಿಸುತ್ತಿರುವನು | ಬ್ರಾಹ್ಮಣನಾಗಲೆತ್ನಿಸುತ್ತಿರುವನು |
| ೬೬ | ೬ | ಚಂಡಾಲ (ಯಜ್ಞಾ ಮಾಡುವವನು) | (ಯಜ್ಞಾಮಾಡುವವನು) ಚಂಡಾಲ |
| ೬೭ | ೫ | ಋಷಿತ್ತವನ್ನು | ಋಷಿತ್ವವನ್ನು |
| ೬೮ | ೧೫ | ಸ್ವಯುಬಂದು | ಸ್ವಯಂಬಂದು |
| ೬೯ | ೧೦ | ಪರಾನ್ನವಸ್ತು | ಪರಾನ್ನವನ್ನು |

| | | | |
|---|---|---|---|
| ೭೪ | ೨೦ | ಶೂನ್ಯಪ್ರಪೇಶದಿಂದ | ಶೂನ್ಯಪ್ರದೇಶದಿಂದ |
| ೭೫ | ೨ | ಅಲ್ಲಿಯೋ ನಿಲ್ಲು | ಅಲ್ಲಿಯೆ ನಿಲ್ಲು |
| ೭೬ | ೬ | ನಿನಗೆ ಅಲ್ಲ | ನಿನಗೆ ಅಲ್ಲೆ |
| ,, | ೭ | ಮೊದಲೇ ನಿನಗೆ ಹೇಳಿದ್ದೆ | ಮೊದಲೇ ಹೇಳಿದ್ದೆ |
| ೭೮ | ೪ | ವಾದ ನಿನ್ನ ಸಕ್ಕರೆಯು | ವಾದ ಸಕ್ಕರೆಯು |
| ೭೯ | ೨ | ಹೊಂದಿ | ಹೊಂದು ; |
| ೮೧ | ೧೪ | ಬ್ರಹ್ಮಾ | ಬ್ರಹ್ಮ |
| ೮೯ | ೬ | ಮನಸ್ತಾಫ | ಮನಸ್ತಾಪ |
| ೯೧ | ೧೨ | ಅರಳುವವು | ಅರಳುವವು |
| ,, | ೧೬ | ಆದರೂ | ಆದರೆ |
| ೯೬ | ೧೨ | ತಲೆತೆಳಗಾಗಿ | ತಲೆಕೆಳಗಾಗಿ |
| ೯೭ | ೨ | ಅಂಬಾಸನದಲ್ಲಿ | ಲಂಬಾಸನದಲ್ಲಿ |
| ೧೦೫ | ೯ | ಬಾಹ್ಮಣನು | ಬ್ರಾಹ್ಮಣನು |
| ೧೦೮ | ೧೧ | ವಿಶ್ವಾಮಿನ | ವಿಶ್ವಾಮಿತ್ರನ |
| ೧೧೦ | ೧೮ | ಪುಷ್ಕರಸ | ಪುಷ್ಕರಿಣಿಯು |
| ,, | ೨೩ | ಪುಷ್ಕರಸ | ಪುಷ್ಕರ |
| ೧೧೩ | ೧೩ | ಬಿಂದಿಯನ್ನಿಟ್ಟಿಕೊಂಡು | ಬಿಂದಿಗೆಯನ್ನಿಟ್ಟುಕೊಂಡು |
| ೧೧೪ | ೧೫ | ಕೆಷ್ಟವಿಲ್ಲ | ಕಷ್ಟವಿಲ್ಲ |
| ೧೧೫ | ೪ | ನೋಡೋಣವೆ ಬಾ | ನೋಡುವೆಯಂತೆ ಬಾ |
| ೧೧೬ | ೧೦ | ಪತ್ನಿಯನ್ನೇಕೆ | ಪತಿಯನ್ನೇಕೆ |
| ,, | ೨೩ | ಮಾಯಾಂಗಣ | ಮಾಯಾವಿಣೆ |
| ೧೨೩ | ೫ | ಶಕ್ತ್ರಿಯು | ಶಕ್ತಿಯು |
| ೧೨೭ | ೮ | ಗಳಿು | ಗಳಿಗೂ |
| ೧೩೩ | ೨ | ಬಹಳ | ಬಹು |
| ೧೩೬ | ೬ | ಮರಳು | ಮರುಳು |
| ,, | ,, | ಬಂದವಳೂ ಅಲ್ಲ | ಬಂದವಳಲ್ಲ |
| ೧೪೦ | ೨ | ಹೆಂಗಸು | ಹೆಂಗಸರು |

| | | | |
|---|---|---|---|
| ,, | ೮ | ಕೆಡವಬಲ್ಲೆ | ಕೆಡಹಬಲ್ಲೆ |
| ೧೪೨ | ೨೨ | ನಂದವನವನ್ನು | ನಂದನವನವನ್ನು |
| ೧೪೪ | ೬ | ವಿಮೋಚನೆಯಾಗುವುದಿಲ್ಲ | ವಿಮೋಚನೆಯಾಗುವುದಿಲ್ಲವೊ |
| ೧೪೬ | ೧೫ | ಕಾಮುಸ | ಕಾಮುನ |
| ೧೫೦ | ೧೦ | ನಾಡಿದ್ದೇನೆ | ನೋಡಿದ್ದೇನೆ. |
| ೧೫೫ | ೧೭ | ಶುನಶೇಫರ | ಶುನಶ್ಶೇಫರ |
| ೧೫೯ | ೪ | ನನಗೆ | ನನ್ನ |
| ೧೬೧ | ೨ | ಕೊಟ್ಟಿದ್ದು | ಕೊಟ್ಟದ್ದು. |
| ,, | ೨೧ | ಎಲೈ | ಎಲೌ |
| ೧೬೫ | ೧೬ | ನಿನಾ | ನಿನ್ನಾ |
| ೧೭೧ | ಕೊನೆ | ಅವನ | ಆತನ |
| ೧೭೬ | ೧೪ | ನಾನೆಂತಹ | ನೀನೆಂತಹ |
| ೧೭೮ | ೨೨ | ನಾಗಶಯನೇ | ನಾಗಶಯನಾ |
| ೧೭೯ | ೩ | ಶ-ನಿವಾಸ | ಶ್ರೀ-ನಿವಾಸ |
| ೧೮೧ | ೧೧ | ಹಸಿಯು | ಹಸಿವೆಯು |
| ೨೦೩ | ೨ | ಬಾಹ್ಮಣ | ಬ್ರಾಹ್ಮಣ |
| ೨೦೬ | ೨೧ | ಮುಂದಣ ಯಜ್ಞ | ಮಾರಣಯಜ್ಞ |
| ೨೦೭ | ೪ | ಮರಣಯಜ್ಞ | ಮಾರಣಯಜ್ಞ |
| ,, | ೧೧ | ,, | ,, |
| ,, | ೨೧ | ,, | ,, |
| ೨೦೮ | ಕೊನೆ | ಮಾಡಿದಂತಾಗುತ್ತದೆ | ಮಾಡದಂತಾಗುತ್ತದೆ |
| ೨೧೭ | ೨೧ | ಮರಣಯಜ್ಞ | ಮಾರಣಯಜ್ಞ |
| ೨೨೧ | ೯ | ದಿಕ್ಕಿಲ್ಲದವರ | ದಿಕ್ಕಿಲ್ಲದವರು |
| ೨೨೪ | ೨ | ಎಂಥ ಮುಳ್ಳುಗಳಿಂದ ದಟ್ಟವಾದ | ಮುಳ್ಳುಗಳಿಂದ ದಟ್ಟವಾದ ಎಂಥ |
| ೨೨೬ | ೨ | ಎಲ್ಲ | ಎಲ್ಲಿ |
| ೨೨೮ | ೨ | ಬ್ರಾಹ್ಮಣನ | ಬ್ರಾಹ್ಮಣರ |

---

॥ ಶ್ರೀ ॥

# ತಪೋಬಲ.

---

## ಮೊದಲನೆಯ ಅಂಕ.

---

### ಮೊದಲನೆಯ ನೋಟ.

[ವಸಿಷ್ಠನ ತಪೋವನದ ಒಂದುಕಡೆ ವಿಶ್ವಾಮಿತ್ರನ ಸಭಾಸದರು, ಸೇನಾಪತಿ, ಸದಾನಂದ, ಇವರ ಪ್ರವೇಶ.]

ಸದಾನಂದ—ಅನ್ಯಾಯ ! ಅನ್ಯಾಯ ! ಬಹಳ ಅನ್ಯಾಯ !

ಸಭಾಸದ—ಯಾರ ಅನ್ಯಾಯ ? ಸ್ವಾಮಿ !

ಸದಾ—ಈ ಬ್ರಹ್ಮನ—

ಸಭಾ—ಹೇಗೆ ? ಹೇಳಿ ನೋಡೋಣ.

ಸದಾ—ಈಗ ನೋಡಿ ತನಗೆ ಮಾತ್ರ ನಾಲ್ಕು ಮುಖ. ಅಲ್ಲದೆ ಹೊಟ್ಟೆಯು ಪ್ರಪಂಚವನ್ನೆಲ್ಲಾ ಹಿಡಿಯುವಷ್ಟು ದೊಡ್ಡದು. ಮನುಷ್ಯನಿಗೆ ಮಾತ್ರ ಒಂದೇ ಮುಖ, ಒಂದೇ ಹೊಟ್ಟೆ. ಅದೂ ಬಹಳ ಸಣ್ಣ ಹೊಟ್ಟೆ. ಇನ್ನಾರಿಂದಲೂ ಹೊಟ್ಟೆಯನ್ನು ಸಾಲ ಕೇಳಿ ತೆಗೆದುಕೊಳ್ಳುವ ಹಾಗೂ ಇಲ್ಲ. ಈ ನನ್ನ

ಹೊಟ್ಟೆಯನ್ನು ಕಿವಿಯ ವರೆಗೆ ಹೆಚ್ಚಿಸಿಕೊಳ್ಳಬೇಕೆಂದು ಆಸೆ.

ಸೇನಾಪತಿ—ಹೌದು, ಹೌದು, ನೋಡಿದರೆ ಅನ್ಯಾಯವೇನೋ ನಿಶ್ಚಯ !

ಸದಾ—ಅನ್ಯಾಯವಲ್ಲವೇ? ರಾಶಿರಾಶಿಯಾಗಿ ಕಡುಬು! ರಾಶಿರಾಶಿಯಾಗಿ ಅಂಬೊಡೆ ! ಬೆಟ್ಟದಂತೆ ರಾಶಿ ಹಾಕಿರುವ ಭಕ್ಷ್ಯಗಳು ! ಕೊಳಗಕೊಳಗಗಳಲ್ಲಿ ಹಾಲು ಕೊಳಗಕೊಳಗಗಳಲ್ಲಿ ಮೊಸರು! ಅಯ್ಯೋ ! ಏನಾಗಿ ಹೋಯಿತಪ್ಪಾ ! ಇದನ್ನೆಲ್ಲಾ ಬಿಟ್ಟು ಹೊರಟು ಹೋಗಬೇಕಾಗಿ ಬಂತಲ್ಲಾ ! ಪ್ರಿಯೆ ! ನೀನೆಲ್ಲಿರುವೆ? ನಮ್ಮ ಚಿಳ್ಳೆಪಿಳ್ಳೆಗಳನ್ನು ಕೈ ಹಿಡಿದು ಕರೆದುಕೊಂಡು ಬರಬಾರದೆ? ನನಗೆ ದಾಹದಿಂದ ಪ್ರಾಣಹೋಗುತ್ತಿದೆ. ಕೊನೆಗಾಲದಲ್ಲಿ ಒಂದು ಸಲ ಬಂದು ನೋಡು !

ಸೇನಾ—ಈಗೇನು ಮಾಡುತ್ತೀರಿ? ನಡೆಯಿರಿ, ಮನಸ್ಸಿನ ದಾಹ ಮನಸ್ಸಿನಲ್ಲಿಯೇ ಇದ್ದರೇನು ಪ್ರಯೋಜನ? ನಮ್ಮ ರಾಜಧಾನಿಗೆ ಹಿಂದಿರುಗೋಣ.

ಸದಾ—ನಡೆನಡೆ. ನನ್ನ ಹತ್ತಿರ ಮಾತನಾಡಬೇಡ. ನನಗೆ ಈಗ ಕೋಪ ಬಂದಿದೆ. ಆ ವಸಿಷ್ಠನ ಅತಿಥಿಸತ್ಕಾರವನ್ನು ಬಿಟ್ಟು ನಾನು ಈ ವನದಿಂದ ಕದಲುವುದಿಲ್ಲ. ವಸಿಷ್ಠನು ಎಂತಹ ಭಾಗ್ಯವಂತನಾದ ಋಷಿ ! ರಾಜಾಧಿರಾಜರೂ ಇಂತಹ ಊಟ ತಿಂಡಿ

ಗಳನ್ನು ಕಣ್ಣಿನಲ್ಲಿಯೂ ನೋಡಲಾರರು. ಆ ಊಟ ತಿಂಡಿಯ ಪದಾರ್ಥಗಳು! ರಾಜನ ಅಸಂಖ್ಯಾಕವಾದ ಚತುರಂಗ ಬಲಕ್ಕೆಲ್ಲಾ ವಿತರಣೆ! ಒಬ್ಬ ಸಾಮಾನ್ಯನಾದ ಕಾಲಾಳಿಗೂ ತಪ್ಪಿಸಲಿಲ್ಲ!! ಆದರೆ ನನಗೆ—ಬಾಯಿಗೆ ಒಂದೆರಡು ಚೂರು ಹಾಕಿದೆನೋ ಇಲ್ಲವೋ—ಹೊಟ್ಟೆಯು ತುಂಬಿಯೇ ಹೋಯಿತು. ಅಯ್ಯೋ! ಏನಾಗಿ ಹೋಯಿತು! ಪ್ರಿಯೆ! ಇನ್ನು ನಿನ್ನನ್ನು ನೋಡುವ ಹಾಗಿಲ್ಲ. ನನಗೆ ಮಾತನಾಡುವುದಕ್ಕೂ ಕೈಯಲ್ಲಾಗುವುದಿಲ್ಲ. ಈ ತಪೋವನವನ್ನು ಬಿಟ್ಟು ನಾನು ಇನ್ನೆಲ್ಲಿಗೂ ಕದಲುವುದೇ ಇಲ್ಲ.

ಸಭಾ—ಏನು ಸ್ವಾಮಿ? ಇಷ್ಟು ವೈರಾಗ್ಯ ಬಂದು ಬಿಟ್ಟದೆ?

ಸದಾ—ಬರುವುದಿಲ್ಲವೇ? ಬ್ರಾಹ್ಮಣನ ಮಗನಾಗಿ, ತಪೋವನಕ್ಕೆ ಬಂದು, ತಪೋವನವನ್ನು ಬಿಟ್ಟು ಹೋಗಬಲ್ಲೆನೆ?

[ವಿಶ್ವಾಮಿತ್ರ ವಸಿಷ್ಠರ ಪ್ರವೇಶ]

ವಿಶ್ವಾಮಿತ್ರ—ಋಷಿಗಳೆ! ಎಂತಹ ಅದ್ಭುತವಾದ ಘಟನೆ! ಊಹಿಸುವುದಕ್ಕೂ ಅಸಾಧ್ಯವಾಗಿದೆಯಲ್ಲಾ! ಈ ನನ್ನ ಬಾಹುಬಲದಿಂದ ಈ ಪ್ರಪಂಚವನ್ನೆಲ್ಲಾ ಸುತ್ತಿ ಅನೇಕ ಸ್ಥಳಗಳಲ್ಲಿ ಅತಿಥಿಸತ್ಕಾರವನ್ನೂ ಗೌರವವನ್ನೂ ಪಡೆದಿರುವೆನು. ಆದರೆ,

ಇಂತಹ ಅತಿಥಿಸತ್ಕಾರವು ಮತ್ತೆಲ್ಲಿಯೂ ದೊರೆಯು ಲೇ ಇಲ್ಲ. ಹಿಂದೆ ನಾವು ಯಾವಾಗಲೂ ಕಂಡು ಕೇಳಿಲ್ಲದಿದ್ದ ವಸನ ಭೂಷಣಾದಿಗಳೂ, ಭಕ್ಷ್ಯಭೋಜ್ಯಾದಿಗಳೂ ಎಲ್ಲವೂ ನಿಮ್ಮ ತಪೋವನದಲ್ಲಿ ತುಂಬಿ ತುಳುಕುತ್ತಿವೆ. ಷಡ್ರಸಪೂರಿತವಾದ ಭಕ್ಷ್ಯಭೋಜ್ಯಾದಿಗಳನ್ನು ನನ್ನ ನೂರುಜನ ಮಕ್ಕಳೂ, ಚತುರಂಗ ಬಲವೂ, ತಿನ್ನಲಾರದೆ ಹೋದರು. ತಪಸ್ವಿಗಳೆ! ಹೇಳಿ ಈ ಐಶ್ವರ್ಯವನ್ನು ಎಲ್ಲಿಂದ ಸಂಪಾದಿಸಿದಿರಿ? ಇಷ್ಟು ಅನಾಯಾಸದಿಂದ ಅತಿಥಿಸತ್ಕಾರವನ್ನು ಮಾಡಿದಿರಲ್ಲಾ? ಹೇಗೆ ಮಾಡಿದಿರಿ? ಹೇಳಿ.

ವಸಿಷ್ಠ—ಸಬಲಾ ಎಂಬ ಕಾಮಧೇನುವು ನನ್ನಲ್ಲಿರುವುದು. ಈ ಐಶ್ವರ್ಯ ಬಲದಿಂದ ಯಾವಾಗ ಯಾವ ವಸ್ತು ಎಷ್ಟು ಬೇಕಾದರೂ ಸಬಲೆಯಿಂದ ಹಾಲನ್ನು ಕರೆದರೆ ಆ ಕ್ಷಣದಲ್ಲಿಯೇ ಅದು ಸಿದ್ಧವಾಗುವುದು.

ವಿಶ್ವಾ—ಮುನಿಗಳೆ! ನಿಮಗೆ ಕೋಟಿ ಗೋವುಗಳನ್ನು ಕೊಡುವೆನು. ಅದಕ್ಕೆ ಪ್ರತಿಯಾಗಿ ಸಬಲೆಯನ್ನು ಕೊಟ್ಟು ಬಿಡಿ.

ವಸಿಷ್ಠ—ಮಹಾರಾಜ! ನೀನು ಹೀಗೆ ಹೇಳಬಹುದೆ? ಸಬಲೆಯನ್ನು ನಾನು ಹೇಗೆ ಬಿಟ್ಟುಕೊಡಲಿ?

ವಿಶ್ವಾ—ತಾಪಸರೆ! ಕೇಳಿ, ನಿಮಗೆ ಧನ, ರತ್ನ, ರಾಜ್ಯ, ಮತ್ತೆ ಇನ್ನಾವುದರಲ್ಲಿ ಅಭಿಲಾಷೆಯಿದ್ದರೂ ಹೇಳಿ.

ಎಲ್ಲವನ್ನೂ ನಿಮಗೆ ಕೊಡುವೆನು. ನನಗೆ ಸಬಲೆಯನ್ನು ಕೊಟ್ಟು ಬಿಡಿ.

ವಸಿಷ್ಠ—ಮಹಾರಾಜ! ನನಗೇನು ಐಶ್ವರ್ಯಕ್ಕೆ ಅಭಾವ! ಕಲ್ಯಾಣಿಯಾದ ಸಬಲೆಯಿಂದ ಬೇಕಾದುದನ್ನು ಪಡೆಯಬಲ್ಲೆನು.

ವಿಶ್ವಾ—ಮುನಿವರ್ಯರೆ! ನನ್ನ ಮಾತಿಗೆ ಗೌರವವನ್ನು ಕೊಡಿ. ನಾನು ಕೇಳುವ ದಾನವನ್ನು ಕೊಡಿ. ಕೃಪೆ ಮಾಡಿ.

ವಸಿಷ್ಠ—ಮಹಾರಾಜ! ನಿನ್ನ ಆಸೆಯನ್ನು ನಾನು ತೀರಿಸಲಾರೆ. ಕಾಮಧೇನುವಾದ ಸಬಲೆಯ ಪ್ರಭಾವದಿಂದ ಯಜ್ಞಯಾಗ, ಪಿತೃಕ್ರಿಯೆ, ಅತಿಥಿ ಸತ್ಕಾರವೇ ಮುಂತಾದವು ಅನಾಯಾಸದಿಂದ ಮನಸ್ಸಮಾಧಾನವಾಗುವಂತೆ ನಡೆಯುತ್ತಿರುವುವು. ಮಹಾರಾಜ! ಅನ್ಯಾಯವಾದ ಯೋಚನೆಯು ನಿನಗೇಕೆ?

ವಿಶ್ವಾ—ಮುನಿಯೆ! ನಾನು ನಿನಗೆ ದೊರೆಯೆಂಬುದನ್ನು ಬಲ್ಲೆಯೋ!

ವಸಿಷ್ಠ—ದೊರೆಯ ವಿಷಯದಲ್ಲಿ ನಾನು ನಡಸಬೇಕಾದ ಕರ್ತವ್ಯವನ್ನು ನಡೆಸಿಯೇ ಇರುವೆನು.

ವಿಶ್ವಾ—ಈ ಭೂಲೋಕದಲ್ಲಿ ಉತ್ತಮವಾದ ರತ್ನಗಳೆಲ್ಲಿದ್ದರೂ ಎಲ್ಲಕ್ಕೂ ದೊರೆಯೇ ಹಕ್ಕುದಾರ ಮತ್ತು ಅಧಿಕಾರಿ. ರಾಜನನ್ನು ವಂಚಿಸಿ ಗೋರತ್ನವನ್ನು ಇಟ್ಟುಕೊಂಡಿರುವೆ.

ವಸಿಷ್ಠ—ತಪಃಪ್ರಭಾವದಿಂದ ಕಾಮಧೇನುವನ್ನು ಸಂಪಾದಿಸಿರುವೆನು. ಅದರ ಮೇಲೆ ರಾಜನ ಅಧಿಕಾರವಿಲ್ಲವೆಂಬುದು ಶಾಸ್ತ್ರಮತ.

ವಿಶ್ವಾ—ರಾಜನಿಗೆ ಎಲ್ಲದರ ಮೇಲೆಯೂ ಅಧಿಕಾರವುಂಟು. ಸಬಲೆಯನ್ನು ಕೊಡು. ಇಲ್ಲದಿದ್ದರೆ ಬಲಾತ್ಕಾರದಿಂದ ತೆಗೆದುಕೊಳ್ಳುವೆನು.

ವಸಿಷ್ಠ—ಸಬಲೆಯೆಂಬ ಗೋಧನವು ನನ್ನ ಮಗಳಿಗಿಂತ ಹೆಚ್ಚು ಪ್ರಿಯವಾದದ್ದು. ನನ್ನ ಮನಃಪೂರ್ತಿಯಾಗಿ ನಿನಗೆ ಅದನ್ನು ಕೊಡಲಾರೆ. ಕಾಮಧೇನುವಿನ ಇಚ್ಛೆಯಂತೆ ನಾನು ಇರತಕ್ಕವನು. ಕಾಮಧೇನುವು ತನ್ನ ಮನಸ್ಸು ಬಂದಂತಿರುವುದು. ನೀನು ಪ್ರಯತ್ನಪಟ್ಟು ತೆಗೆದುಕೊಂಡು ಹೋಗುವುದಾದರೆ ತೆಗೆದುಕೊ ! ಬಲಾತ್ಕಾರದಿಂದ ರಾಜನು ತೆಗೆದುಕೊಂಡು ಹೋದರೆ, ದರಿದ್ರ ಬ್ರಾಹ್ಮಣನಾದ ನನಗೆ ಉಪಾಯವೇನಿರುವುದು? ಆದರೆ ಇದು ಮಾತ್ರ ನಿಶ್ಚಯ. ನಾನು ಮನಃಪೂರ್ವಕವಾಗಿ ಬೇರೆ ಸಬಲೆಯನ್ನುಕೊಡಲಾರೆ.

ವಿಶ್ವಾ—ಸೇನಾಪತಿ ! ಕಾಮಧೇನುವನ್ನು ಹಿಡಿದುಕೊಂಡು ಬರುವಂತೆ ಸೇನೆಗೆ ಅಪ್ಪಣೆ ಮಾಡು. ಯಾವ ರತ್ನದ ಮೇಲೆ ಧೊರೆಗೆ ಅಧಿಕಾರವಿರುವುದೋ ಅಂತಹ ರತ್ನವನ್ನು ಈ ಬ್ರಾಹ್ಮಣನು ನನಗೆ ವಂಚನೆ ಮಾಡಿ ಇಟ್ಟುಕೊಂಡಿದ್ದಾನೆ. (ಸೇನಾಪತಿಯು ಹೊರಟು ಹೋಗುವನು.)

ವಸಿಷ್ಠ—ಮಹಾರಾಜನಿಗೆ ಜಯವಾಗಲಿ! (ವಸಿಷ್ಠನು ಹೊರಟು ಹೋಗುವನು)

ಸಭಾ—ನೋಡಿದೆಯೋ! ಸದಾನಂದ, ನೋಡಿದೆಯೋ! ಭಂಡಬ್ರಾಹ್ಮಣನು "ಜಯವಾಗಲಿ" ಎಂದು ಹೇಳಿ ಮನಸ್ಸಿನಲ್ಲಿಯೇ "ಕ್ಷಯವಾಗಲಿ" ಎಂದುಕೊಂಡದ್ದನ್ನು ನೋಡಿದೆಯೋ? ಇನ್ನು ನಿನಗೆ ಅನುಕೂಲವಾಯಿತು. ಇನ್ನು ನೀನು ಕಾಡಿಗೆ ಬಂದು ಸಂತುಷ್ಟನಾಗಬೇಕಾದ್ದಿಲ್ಲ. ರಾಜಧಾನಿಯಲ್ಲಿಯೇ ಸಂತುಷ್ಟನಾಗಬಹುದು.

ಸದಾ—ಏನಪ್ಪಾ? ಚೆನ್ನಾಗಿ ಗೊತ್ತಾಗಲಿಲ್ಲ.

ವಿಶ್ವಾ—ಏನು ಚೆನ್ನಾಗಿ ಗೊತ್ತಾಗಲಿಲ್ಲ?

ಸದಾ—ಮಹಾರಾಜ! ಈ ಬ್ರಾಹ್ಮಣರ ಹಸುವು—ಕಾಡು, ಬೆಟ್ಟ ಗುಡ್ಡಗಳಲ್ಲಿ ಮೇಯುತ್ತಿದ್ದುದು ಈಗ ರಾಜಧಾನಿಯ ಹುಲ್ಲುಗಾವಲಿನಲ್ಲಿಯೇ ಮೇಯುವುದು.

ಸಭಾಸದ—ನೀನೂ ಬ್ರಾಹ್ಮಣನಾಗಿದ್ದೀಯೆ. ಮಹಾರಾಜನಿಗೆ ಹೇಳಿದರೆ ಹಸುವನ್ನು ನಿಮ್ಮ ಮನೆಯಲ್ಲಿಯೇ ಇಟ್ಟುಕೊಳ್ಳುವುದಕ್ಕೆ ಏರ್ಪಾಡುಮಾಡಿಕೊಡುತ್ತಾನೆ.

ಸದಾ—ಗಟ್ಟಿಯಾಗಿ ಹಂಬಾ ಎಂದು ಕೂಗುವುದು, ನೋಡಬೇಕು! (ಸದಾನಂದನು ಹೊರಟು ಹೋಗುವನು.)

ಸಭಾ—ಮಹಾರಾಜ! ಅಕಸ್ಮಾತ್ತಾಗಿ ಯುದ್ಧದ ಕೋಲಾಹಲವು ಕೇಳಿಸುವುದಲ್ಲಾ! ನಮ್ಮ ಸೈನ್ಯವನ್ನು ಶತ್ರುಸೇನೆ ಏನಾದರೂ ಮುತ್ತಿಕೊಂಡಿದೆಯೋ?

(ಮೊದಲನೆಯ ದೂತನ ಪ್ರವೇಶ)

ವಿಶ್ವಾ—ಏನು ಸಮಾಚಾರ?

ಮೊದಲನೆಯ ದೂತ—ಮಹಾರಾಜ! ಹಸುವಲ್ಲ, ಮಹಾರಾಜ! ಹಸುವಲ್ಲ. ಮಾಯಾವಿಯಾದ ರಾಕ್ಷಸ. ನಾವು ಬಲಾತ್ಕಾರದಿಂದ ಕಟ್ಟಿ ಎತ್ತಿಕೊಂಡು ಹೋಗಲು ಯತ್ನಿಸಿದೆವು. ಕಟ್ಟಿದ್ದ ಹಗ್ಗಗಳನ್ನೆಲ್ಲಾ ಕಿತ್ತುಕೊಂಡು ವಸಿಷ್ಠರ ಹತ್ತಿರಕ್ಕೆ ಓಡಿಹೋಯಿತು. ಮನುಷ್ಯರಂತೆಯೇ ಅವರನ್ನು ಕುರಿತು "ತಂದೆ! ನನ್ನನ್ನೇಕೆ ಕಳುಹಿಸಿಕೊಟ್ಟೆ?" ಎಂದು ಕೇಳಿತು. ವಸಿಷ್ಠರು "ಅಮ್ಮಾ! ನಾನು ನಿರುಪಾಯನಾಗಿದ್ದೇನೆ. ರಾಜನು ಬಲಪೂರ್ವಕವಾಗಿ ನಿನ್ನನ್ನು ತೆಗೆದುಕೊಂಡು ಹೋಗಲೆತ್ನಿಸಿದ್ದಾನೆ. ನಾನು ನಿನ್ನನ್ನು ಕಳುಹಿಸಿಕೊಡಲಿಲ್ಲ. ಕ್ಷತ್ರಿಯರ ಬಲವು- ಪರಾಕ್ರಮ, ಬ್ರಾಹ್ಮಣರ ಬಲವು- ಸಹನೆ. ನಿನಗಿಷ್ಟವಿದ್ದರೆ ಹೋಗು" ಎಂದರು. ಹಸುವು ಅದಕ್ಕೆ "ಅಪ್ಪಣೆಯಾದರೆ ನಾನೇ ಆತ್ಮರಕ್ಷಣೆಯನ್ನು ಮಾಡಿಕೊಳ್ಳುವೆನು" ಎಂದು ಹೇಳಿತು. ವಸಿಷ್ಠರು ಅಪ್ಪಣೆಯನ್ನು ಕೊಟ್ಟರು. ಆ ಹಸುವು ಹುಂಕಾರ ಮಾಡುತ್ತಾ, ಬಲು ಭಯಂಕರವಾದ ರೂಪವನ್ನು ತಾಳಿ

ತು. ಅಬ್ಬಬ್ಬಾ! ಈಗಲೂ ನೆನಸಿಕೊಂಡರೆ ಎದೆಯು ಡವಡವ ನಡುಗುವುದು. ಹಸುವಿನ ಮೈಯಿಂದ ನಾನಾವರ್ಣದ ಸೈನ್ಯವು ಹುಟ್ಟಿ ನಮ್ಮನ್ನು ಎದುರಿಸುತ್ತಿದೆ. ಸೇನಾಪತಿಯು ಪ್ರಾಣದ ಮೇಲೆ ಆಸೆಯಿಲ್ಲದೆ ಯುದ್ಧ ಮಾಡುತ್ತಿದ್ದರೂ ಶತ್ರುಗಳು ಸೋಲುತ್ತಿಲ್ಲ.

(ಸದಾನಂದನ ಪುನಃ ಪ್ರವೇಶ)

ಸದಾನಂದ—ಮಹಾರಾಜ! ಓಡಿ ಹೋಗೋಣ, ನಡೆ! ಓಡಿ ಹೋಗೋಣ! ಹಸುವು ಸಗಣಿಯ ಸುರುಳಿಗಳನ್ನು ಹಾಕುವುದಕ್ಕಿಂತಲೂ ಹೆಚ್ಚಾಗಿ ಸೈನ್ಯವನ್ನು ಉಮರಿಸುತ್ತಿದೆ. ಓಡಿ ಹೋಗೋಣ ನಡೆ. ಪಲಾಯನ ಮಾಡೋಣ. ಒಂದು ಕ್ಷಣವೂ ನಿಧಾನ ಮಾಡಕೂಡದು. ಮೊದಲು ಹೊರಡೋಣ.

(ಸೇನಾಪತಿಯು ಪ್ರವೇಶ)

ಸೇನಾಪತಿ—ಮಹಾರಾಜ! ಅದ್ಭುತ! ಅದ್ಭುತ! ಕಾಮಧೇನುವನ್ನು ರಾಜಧಾನಿಯ ಕಡೆಗೆ ಹೊಡೆದಟ್ಟಿಕೊಂಡು ಹೋಗುತ್ತಿದ್ದೆವು. ಇದ್ದಕ್ಕಿದ್ದ ಹಾಗೆಯೆ ಧೇನುವು ಭಯಂಕರವಾದ ರೂಪನ್ನು ತಾಳಿತು. ಕೆಂಡದಂತೆ ಕೆಂಪಾದ ಕಣ್ಣು! ಮೇಲಕ್ಕೆತ್ತಿದ ಬಾಲ! ಬಹಳ ಘೋರವಾದ ಹಂಬಾ ಧ್ವನಿ! ಕೆಂಪು, ಕಪ್ಪು, ಹಳದಿ ವರ್ಣಗಳ ವಿಕಟಾಕಾರವುಳ್ಳ ಸೈನ್ಯಗಳನ್ನು ತನ್ನ ಮೈಯಿಂದ ಉದುರಿ

ಸಿತು! ನಾನಾ ಅಸ್ತ್ರಗಳಿಂದ ರಾಜ ಸೈನ್ಯವು ಆ ಸೈನ್ಯಗಳನ್ನು ಮುತ್ತಿತು. ನಮ್ಮ ಸೈನ್ಯವು ಬಹಳ ಭಯದಿಂದ ದಿಕ್ಕೆಟ್ಟು ಓಡುತ್ತಿದೆ.

ವಿಶ್ವಾ—ಏನು ! ಭಯಪಟ್ಟು ಸೈನ್ಯವು ಪಲಾಯನ ಮಾಡುತ್ತಿದೆಯೇ ? ನೀನೂ ರಣಭೂಮಿಯನ್ನು ಬಿಟ್ಟು ಬಂದೆಯಾ ? ಬಾ. ಶತ್ರುಸೈನ್ಯದ ಬಲವನ್ನು ನೋಡೋಣ.

(ಯುವರಾಜನ ಪ್ರವೇಶ)

ಯುವರಾಜ—ರಾಜಾಧಿರಾಜನಾದ ನೀನೇಕೆ ಮುಂದುವರಿಯಬೇಕು ? ನಾವು ನೂರು ಮಂದಿ ಅಣ್ಣತಮ್ಮಂದಿರು ಸಿದ್ಧರಾಗಿರುವೆವು.

ವಿಶ್ವಾ—ಹೋಗಿ, ಆ ಭಣ್ಡ ತಪಸ್ವಿಯನ್ನು ನನ್ನ ಸಮೀಪಕ್ಕೆ ಹಿಡಿದುಕೊಂಡು ಬನ್ನಿ. ರಾಜಾಜ್ಞೆಯನ್ನು ತಿರಸ್ಕಾರ ಮಾಡಿದ್ದರಿಂದ ಅವನು ದಂಡನೆಗೆ ಅರ್ಹನಾಗಿರುವನು. (ಯುವರಾಜನು ಹೊರಟು ಹೋಗುವನು) ಸೇನಾಪತಿ ! ಸಾಹಸವಿದ್ದರೆ ಕುಮಾರನ ಹಿಂದೆ ಹೋಗು. (ಸೇನಾಪತಿಯು ಹೊರಡುವನು)

ಸಭಾ—ಮಹಾರಾಜ ! ಘೋರವಾದ ರಣ ಕೋಲಾಹಲವು ಕೇಳಿ ಬರುತ್ತಿರುವುದು. ಅಸ್ತ್ರದ ಪ್ರಕಾಶದಿಂದ ದಿಕ್ಕುಗಳೆಲ್ಲಾ ಬೆಳಕಾಗಿರುವುವು.

ವಿಶ್ವಾ—ಇದೇನು ! ಮಹಾ ಅಸ್ತ್ರವನ್ನು ಯಾರು ಪ್ರಯೋಗಮಾಡಿದರು ? ಯಾವ ದೇವರಥನು ವಸಿಷ್ಠನ ಸಹಾಯಕ್ಕೆ ಬಂದಿರುವನು?

(ಎರಡನೆಯ ದೂತನ ಪ್ರವೇಶ)

ಎರಡನೆಯ ದೂತ—ಮಹಾರಾಜ ! ಮಹಾರಾಜ !

ವಿಶ್ವಾ—ಏನು ಸಮಾಚಾರ ? ಬೇಗ ಹೇಳು!

ಎರ. ದೂತ—ಮಹಾರಾಜ, ವಸಿಷ್ಠನು ಬ್ರಾಹ್ಮಣನಾದರೂ ಕಾಲಾಂತಕನಾದ ಯಮನಾಗಿದ್ದಾನೆ. ಯುದ್ಧಕ್ಕೋಸ್ಕರ ಕೈಯಲ್ಲಿ ದಂಡವನ್ನು ಹಿಡಿದು ನಿಂತಿದ್ದಾನೆ. ದಂಡದ ಬಾಯಿಂದ ಬೆಂಕಿಯು ಹೊರಡುತ್ತಿದೆ. ರಾಜಸೈನ್ಯವೆಲ್ಲಾ ಹತ್ತಿಯಂತೆ ಉರಿದು ಹೋಗುತ್ತಿದೆ.. ತಮ್ಮ ನೂರು ಜನ ಕುಮಾರರೂ ಮುಂದುವರಿಯುತ್ತಿದ್ದರು. ಬೆಂಕಿಯ ಮಳೆಯು ಸುರಿಯುವಂತಿದೆ. ಆ ಬ್ರಾಹ್ಮಣನ ಹತ್ತಿರ ಹೋಗಲು ಯಾರೂ ಸಮರ್ಥರಲ್ಲ. ಈ ಮಹಾ ಯುದ್ಧದಲ್ಲಿ ಏನಾಗುವುದೋ ಯಾರು ಬಲ್ಲರು ?

(ಮೂರನೆಯ ದೂತನ ಪ್ರವೇಶ)

ಮೂ. ದೂತ—ಮಹಾರಾಜ ! ಮಹಾರಾಜ ! ವಸಿಷ್ಠನಿಂದ ತಮ್ಮ ನೂರು ಜನ ಮಕ್ಕಳೂ ಹತರಾದರು. ಅಚಲವಾದ ಮೇರುವಿನಂತೆ ವಸಿಷ್ಠನು ನಿಂತಿದ್ದಾನೆ. ನೂರು ಮಂದಿ ಕುಮಾರರೂ ಹತರಾದರು.

ವಿಶ್ವಾ—ನನ್ನ ಮಕ್ಕಳನ್ನೆಲ್ಲಾ ಕೊಂದ ಆ ಬ್ರಾಹ್ಮಣನಿಗೆ ಇಂದು ಉಳಿಗಾಲವಿಲ್ಲ. (ಸದಾನಂದ, ಸಭಾಸದರು ವಿನಹಾ ಮತ್ತೆಲ್ಲರೂ ಹೊರಟು ಹೋಗುವರು.)

ಸದಾ—ಇನ್ನೇನು ನೋಡುತ್ತೀರಿ! ನಡೆಯಿರಿ. ರಾಜನ ಹಿಂದೆ ಹೋಗಿ ಪುಡಿಪುಡಿಯಾಗೋಣ.

ಸಭಾ—ಅಯ್ಯಾ ಬ್ರಾಹ್ಮಣ, ಈ ಸಮಯದಲ್ಲಿಯೂ ಪರಿಹಾಸ ಮಾಡಬೇಕೇ?

ಸದಾ—ಇಲ್ಲ. ಇದು ಪರಿಹಾಸವಲ್ಲ. ಭಸ್ಮವಾದರೆ ದೇಹದ ಭಾರವು ಸ್ವಲ್ಪ ಕಡಿಮೆಯಾಗುವುದು. ಗಾಳಿಯ ಹೊಡೆತದಿಂದ ಅತ್ತಿತ್ತ ಸಂಚಾರ ಮಾಡಬಹುದು.

ಸಭಾ—ಏನು? ನೀನು ಯುದ್ಧ ಮಾಡುವುದಿಲ್ಲವೆ?

ಸದಾ—ಇಲ್ಲ. ನಾನು ಯುದ್ಧಮಾಡುವುದಿಲ್ಲ. ಭಸ್ಮವಾಗುವೆನು.

ಸಭಾ—ಅದೇನು?

ಸದಾ—ಏನು ಎಂದರೆ! ರಾಜನ ಜೊತೆಯಲ್ಲಿ ಅನೇಕ ಭಕ್ಷ್ಯಭೋಜ್ಯಾದಿ ಆಹಾರಗಳಾಯಿತು. ನಾನಾ ವರ್ಣದ ರಾಜಯೋಗ್ಯವಾದ ಬಟ್ಟೆಬರೆಗಳನ್ನು ಹೊದ್ದುದಾಯಿತು. ಹಲವು ಬಗೆಯ ಆಮೋದವನ್ನೂ ಆಹ್ಲಾದವನ್ನೂ ಅನುಭವಿಸಿಯಾಯಿತು. ಕೊನೆಗೆ

ಈಗ ಓಡಬೇಕು. ಮತ್ತೇನೂ ಉಳಿದಿಲ್ಲ. ತಾವು ಬೇಕಾದರೆ, ಮೆಲ್ಲಮೆಲ್ಲನೆ ಹಿಂದಿರುಗಿ. ಆದರೆ ನಮ್ಮ ಮನೆಯ ಹೆಂಗಸಿಗೆ ಮಾತ್ರ ಸಮಾಚಾರವನ್ನು ತಿಳಿಸಿ. ನಿನ್ನ ಗಂಡನು ಅಗ್ನಿ ಸ್ಪರ್ಶದಿಂದ ದೇಹವನ್ನು ಪವಿತ್ರಮಾಡಿಕೊಂಡನು ಎಂದು ತಿಳಿಸಿ.

ಸಭಾ—ನಾನೂ ದೇಹವನ್ನು ಪವಿತ್ರ ಮಾಡಿಕೊಳ್ಳಲು ಹೊರಡುವೆನು.

ಸದಾ—ನಿಶ್ಚಯ! ನೋಡಿ. ಒಂದೇ ದಿನ ಅನೇಕ ಶ್ರಾದ್ಧಾದಿಗಳು ನಡೆಯುವುವು. ಬದುಕಿದ್ದರೆ ಅನೇಕ ಶ್ರಾದ್ಧ ಭೋಜನಗಳೂ ದೊರೆಯುವುವು. (ಎಲ್ಲರೂ ಹೊರಟು ಹೋಗುವರು)

## ಎರಡನೆಯ ನೋಟ.

[ವಸಿಷ್ಠರ ತಪೋವನದಲ್ಲಿ ಇನ್ನೊಂದು ಕಡೆ]

ವಸಿಷ್ಠ ಮತ್ತು ವಿಶ್ವಾಮಿತ್ರ ನಿಂತಿರುವರು

ವಸಿಷ್ಠ—ನೃಪಾಧಮ! ಇನ್ನೂ ನಿನ್ನ ಜಂಭವು ಮುರಿಯಲಿಲ್ಲವೆ? ನಿನ್ನ ನೂರು ಜನ ಮಕ್ಕಳು ಹೋದರು. ಅರಣ್ಯದಂತಿದ್ದ ಸೈನ್ಯವು ಹಾಳಾದದ್ದನ್ನೂ ಕಣ್ಣಿಂದ ನೋಡಿರುವೆ. ಆದರೂ ನಿನಗೆ ಬ್ರಹ್ಮತೇಜದ ಸತ್ವವು ತಿಳಿಯಲಿಲ್ಲವೆ? ಕುದುರೆ, ರಥ, ಸಾರಥಿ ಎಲ್ಲರೂ ಹೋದರು. ನಿನ್ನ ಬತ್ತಳಿಕೆಯೂ ಹಾಳಾಯಿತು. ಧನುಸ್ಸೂ ಮುರಿದು ಹೋಗಿದೆ. ಆದರೂ ಇನ್ನೂ ಗದೆಯನ್ನು ಕೈಯಲ್ಲಿ ಹಿಡಿದು ಝಳಪಿಸುವೆಯಲ್ಲಾ!

ವಿಶ್ವಾ—ಎಲವೊ ಕಪಟತಪಸ್ವಿಯೆ! ನಿನ್ನ ಈ ದಂಡವನ್ನೇ ನಾಶಮಾಡುವೆನು. ಯಾವ ತೇಜಸ್ಸು ತಾನೇ ಕ್ಷತ್ರಿಯ ತೇಜಸ್ಸನ್ನು ತಡೆಯಬಲ್ಲುದು. ಹುಡುಗರಾದ ನನ್ನ ಮಕ್ಕಳನ್ನೂ ನನ್ನ ಸಾಮಾನ್ಯ ಸೈನ್ಯವನ್ನೂ ಹಾಳು ಮಾಡಿದ ಮಾತ್ರಕ್ಕೆ ನಿನಗಿಷ್ಟು ಅಹಂಕಾರವೇ? ಆ ಅಹಂಕಾರವನ್ನು ಈ ಗದೆಯ ಪೆಟ್ಟಿನಿಂದ ಪುಡಿ ಪುಡಿ ಮಾಡುವೆನು.

ವಸಿಷ್ಠ—ನೃಪಕುಲಕಳಂಕ! ಈಗಲೇ ನಿನ್ನ ಸೊಕ್ಕನ್ನು ಮುರಿಯುವೆನು.

(ಇದ್ದಕ್ಕಿದ್ದ ಹಾಗೆಯೇ ವಸಿಷ್ಠನ ಕೈಯಲ್ಲಿದ್ದ ಬ್ರಹ್ಮದಂಡವು ಜ್ವಲಿಸಲಾರಂಭಿಸುವುದು)

ವಿಶ್ವಾ—ಇದೇನಾಶ್ಚರ್ಯ! ಇದೇನು ಕುಹಕವೋ ಅಥವಾ ಬ್ರಹ್ಮತೇಜಸ್ಸೋ? ಈ ತೇಜಸ್ಸಿನಿಂದಲೇ ನನ್ನ ನೂರು ಮಂದಿ ಪುತ್ರರು ಹತರಾದರೆ? ನನ್ನ ಬತ್ತಳಿಕೆಯು ಬರಿದಾಗಿರುವುದು. ಮಹಾ ಅಸ್ತ್ರಗಳೆಲ್ಲವೂ ಭಸ್ಮೀಭೂತವಾಗಿವೆ. ಬ್ರಾಹ್ಮಣನು ಮಾತ್ರ ಅಲುಗದೆ ಸ್ಥಿರವಾಗಿ ನಿಂತಿರುವನು. ನಾನೂ ಭಸ್ಮವಾಗುವಂತಿದ್ದೇನೆ! ಈ ಭಯಂಕರವಾದ ಅಗ್ನಿಯು ನನ್ನನ್ನು ನುಂಗಲು ಮುಂದುವರಿಯುತ್ತಿದೆ.

(ಅರುಂಧತಿಯ ಪ್ರವೇಶ)

ಅರುಂಧತೀ—ಪ್ರಭು! ಪ್ರಭು! ಬ್ರಹ್ಮತೇಜಸ್ಸನ್ನು ಸಂವರಣ ಮಾಡಿಕೊಳ್ಳಬೇಕು. ಸಾಮಾನ್ಯವಾದ

ಕಾಮಧೇನುವಿಗೋಸ್ಕರ ತಪೋವನದಲ್ಲಿ ಬಹು ನರ ಹತ್ಯಗಳಾಗಿವೆ. ಮಹಾರಾಜ ವಿಶ್ವಾಮಿತ್ರನನ್ನು ಸುಟ್ಟು ಭಸ್ಮಮಾಡಬೇಡಿ. ಆತನ ನೂರು ಮಕ್ಕಳೂ ಭಸ್ಮವಾದರು. ಅರ್ಧ ಸೈನ್ಯವೂ ಭಸ್ಮೀಭೂತವಾಯಿತು. ಅರ್ಧ ಸೈನ್ಯವು ಓಡಿಹೋಯಿತು. ನೋಡೋಣಾಗಲಿ, ಸೈನ್ಯಹೀನನೂ, ಅಸ್ತ್ರಹೀನನೂ, ರಥ ಹೀನನೂ ಆಗಿ ಒಬ್ಬಂಟಿಗನಾದ ಮಹಾರಾಜನು ಬ್ರಹ್ಮ ದಂಡದ ತೇಜಸ್ಸಿನಿಂದ ಮೂರ್ಛೆ ಹೋಗುವಂತಿದ್ದಾನೆ. ಮತ್ತೇಕೆ ಕೋಪಿಸಿಕೊಳ್ಳುವಿರಿ? ತಾವು ಈಗ ತೇಜಸ್ಸನ್ನು ಸಂವರಣ ಮಾಡಿಕೊಳ್ಳದಿದ್ದರೆ ಈಗ ಆತನು ಭಸ್ಮವಾಗಿ ಹೋಗುವನು.

ವಸಿಷ್ಠ—ಏನು ಹೇಳಿದೆ? ನಾನು ತೇಜಸ್ಸನ್ನು ಸಂವರಣ ಮಾಡಿದರೆ ಅಸ್ತ್ರಧಾರಿಯಾಗಿ ಈ ಕ್ಷತ್ರಿಯನು ಈಗಲೇ ನನ್ನನ್ನು ಕೊಂದು ಬಿಡುವನು.

ಅರುಂ—ಪ್ರಭು, ಬ್ರಹ್ಮಜ್ಞರಾದ ಬ್ರಾಹ್ಮಣರಿಗೆ ಜನ್ಮ ಜನನ ಮರಣಗಳುಂಟೆಂಬ ನಾನು ಶ್ರೀಮುಖದಲ್ಲಿ ಯಾವಾಗಲೂ ಕೇಳಿಲ್ಲ. ಬ್ರಹ್ಮತೇಜಸ್ಸನ್ನು ತಾವು ಈಗ ಸಂವರಣ ಮಾಡಿಕೊಳ್ಳದಿದ್ದರೆ ಸಂಸಾರದಲ್ಲಿ ಘೋರತರವಾದ ಅನಿಷ್ಟಗಳುಂಟಾಗುವುವು. ಈ ತೇಜಸ್ಸನ್ನು ಪ್ರಯೋಗಿಸಿದ್ದರಿಂದ ಜನಗಳು ನಾಶವಾಗುವರು. ತಮ್ಮ ಬ್ರಹ್ಮತೇಜವು ಹೋಗಿ ಬಿಡುವುದು. ಬಹಳ ಅನಿಷ್ಟಗಳಾಗಿವೆ. ಕೊನೆಗೆ ಇದರ ಪರಿಣಾಮ ವೇನೆಂಬುದು ಯಾರಿಗೆ ತಾನೆ ಗೊತ್ತು? ಇತ್ತ

ನೋಡಿ, ದೇವತೆಗಳು, ಸಿದ್ಧಚಾರಣರು, ಪ್ರಳಯ ಕಾಲದ ಕಾಲಾನಲದಂತಿರುವ ತಮ್ಮ ಬ್ರಹ್ಮದಂಡದ ತೇಜಸ್ಸನ್ನು ನೋಡಿ ಭಯಪಟ್ಟಿರುವರುವರು. "ಶಾಂತರಾಗಿ! ಶಾಂತರಾಗಿ!" ಎಂದು ಎಲ್ಲರೂ ಕೂಗಿಕೊಳ್ಳುತ್ತಿರುವುದನ್ನು ಕೇಳಿದಿರಾ?

ವಸಿಷ್ಠ—ನೀನು ಸಹಧರ್ಮಿಣೀ. ಸದುಪದೇಶವನ್ನು ಮಾಡುವುದಕ್ಕೂ ಬಾಧ್ಯಳು. ನಾನು ತೇಜಸ್ಸನ್ನು ಸಂವರಣ ಮಾಡಿಕೊಂಡಿರುವೆನು. ನಿಜ. ನಿಜ. ನನಗೆ ಪುನಃ ಜನನ ಮರಣಗಳೆಲ್ಲಿ ಬಂತು? ನಾನು ಸಾಮಾನ್ಯ ಪ್ರಾಣಿಗಳಂತೆ ಜನನ ಮರಣಗಳಿಗೆ ಲಕ್ಷ್ಯ ಕೊಟ್ಟೆನು. ನೀನು ವಿದ್ಯಾಶಕ್ತಿ ಸಂಪನ್ನಳು. ನೀನು ಭಯಪಡುವುದೂ ನ್ಯಾಯ. ಇಷ್ಟು ಕೆಡಕಿಗೂ ಕಾರಣ ನಾನೇ. ನನ್ನ ತಪ್ಪಿನಿಂದ ನೀನೂ ಕಷ್ಟವನ್ನು ಅನುಭವಿಸಬೇಕಾಗಿ ಬಂತು. ವಿಶ್ವಾಮಿತ್ರನ ನೂರು ಜನ ಮಕ್ಕಳನ್ನು ಕೊಂದದ್ದರಿಂದ ನಮ್ಮ ವಂಶಕ್ಕೂ ಅನಿಷ್ಟವುಂಟಾಗುವುದು. ಏನಾದರೂ ವಂಶ ರಕ್ಷಣೆಯಾದರೆ ಅದು ನಿನ್ನ ಪುಣ್ಯ ಬಲದಿಂದಲೇ ಆಗಬೇಕು. (ವಿಶ್ವಾಮಿತ್ರನನ್ನು ಕುರಿತು) ಮಹಾರಾಜ ವಿಶ್ವಾಮಿತ್ರ ನಾನು ತಿಳಿಯದೆ ಕಾಮಧೇನುವನ್ನು ನಿನಗೆ ಕೊಡಲು ಒಪ್ಪಲಿಲ್ಲ. ನಾನು ಧೇನುವಿನ ಮೇಲಿನ ಅಧಿಕಾರವನ್ನು ತ್ಯಾಗ ಮಾಡಿರುವೆನು. ನೀನು ಸ್ವೀಕಾರ ಮಾಡು.

ವಿಶ್ವಾ—ವಸಿಷ್ಠ! ಇಲ್ಲ. ಕಾಮಧೇನುವಿನ ಮೇಲೆ ಅಧಿಕಾರ ಮಾಡಲು ನಾನು ಈಗ ಯೋಗ್ಯನಲ್ಲ. ಕಾಮಧೇನುವಿರುವುದು ನಿನ್ನ ಶಕ್ತಿಯಿಂದ. ಇಲ್ಲದಿದ್ದರೆ ಕಾಮಧೇನುವು ಕೇವಲ ಧೇನುಮಾತ್ರ. ನಾನು ಕಣ್ಣು ಬಿಟ್ಟೆನು. ವಿಚಾರವು ಚೆನ್ನಾಗಿ ತಿಳಿಯಿತು. ಬ್ರಹ್ಮಶಕ್ತಿಯೇ ಶಕ್ತಿ, ಕ್ಷತ್ರಿಯ ಶಕ್ತಿಗೆ ನೂರು-ಸಹಸ್ರ ಧಿಕ್ಕಾರವಿರಲಿ. ಇಂದ್ರನಿಗೆ ಸಮರಾದ ನನ್ನ ನೂರು ಮಂದಿ ಮಕ್ಕಳೂ ನಿನ್ನ ತೇಜಸ್ಸಿನಿಂದ ಭಸ್ಮೀಭೂತರಾದರು. ಯಾವ ಅಸ್ತ್ರದಿಂದ ಸಾಗರವೂ ಶೋಷಿಸಿ ಹೋಗಬೇಕೋ ಆ ಅಸ್ತ್ರವೂ ನಿನ್ನ ತೇಜಸ್ಸಿನ ಮುಂದೆ ನಿಷ್ಫಲ. ಬದುಕಿದ್ದರೆ ಪುನಃ ನಿನ್ನೆದುರಿಗೆ ಬರುವೆನು. (ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋಬಲಂ ಬಲಂ) ಬ್ರಹ್ಮಬಲವೇಬಲ! ಬ್ರಹ್ಮಬಲವೇ ಬಲ! ಕ್ಷತ್ರಿಯ ಬಲಕ್ಕೆ ಶತಧಿಕ್! ಈ ಅವಮಾನಕ್ಕೆ ಪ್ರಾಯಶ್ಚಿತ್ತವು-ಮೃತ್ಯು-ಸಾವು! ಬೇರೆ ಪ್ರಾಯಶ್ಚಿತ್ತವೇ ಇಲ್ಲ. ಇಲ್ಲ. ಬೇರೆ ಪ್ರಾಯಶ್ಚಿತ್ತವಿಲ್ಲ. ಧಿಕ್! ಧಿಕ್! ಕ್ಷತ್ರಿಯ ಬಲಕ್ಕೆ ಧಿಕ್!

(ವಿಶ್ವಾಮಿತ್ರನು ಹೊರಟು ಹೋಗುವನು)

ಅರುಂ—ಪ್ರಭು, ರಾಜನು ಮನಸ್ಸಿನ ದುಃಖದಿಂದ ಸಂಸಾರವನ್ನು ಪರಿತ್ಯಾಗ ಮಾಡಿ ಎಲ್ಲಿಗೋ ಹೊರಟು ಹೋಗುತ್ತಾನೆ. ತಾವು ಅದನ್ನು ತಪ್ಪಿಸಬೇಕು.

ವಸಿಷ್ಠ—ಆ ಶಕ್ತಿಯು ನನಗಿಲ್ಲ. ರಾಜನು ದೃಢ ಸಂಕ

ಲ್ಪವುಳ್ಳವನು. ಅವನ ಸಂಕಲ್ಪವು ಯಾವಾಗಲೂ ಭಂಗವಾಗುವುದಿಲ್ಲ. ತಪಸ್ಸಿಗೆ ಹೋಗುವನೆಂದು ತೋರುತ್ತೆ. ಆಶ್ಚರ್ಯವಾದ ತಪೋಬಲದ ಮಹಾತ್ಮ್ಯವು ಕೂಡಲೆ ಸಂಸಾರದಲ್ಲಿ ಪ್ರಚಾರವಾಗುವುದೆಂದು ಬ್ರಹ್ಮ ಲೋಕದಲ್ಲಿ ಕೇಳಿದ್ದೆನು. ಈಗ ಇದೇ ಅದರ ಸೂಚನೆಯಿರಬಹುದೆಂದು ತೋರುತ್ತದೆ. ಏನು ಮಾಡಲಿ? ಏನು ಮಾಡಲಿ? ಸಾಮಾನ್ಯವಾದ ಕಾಮಧೇನುವಿಗೋಸ್ಕರ ಇಂತಹ ಗರ್ಹಿತ ಕಾರ್ಯವನ್ನು ಮಾಡಿದೆನಲ್ಲಾ!

ಅರುಂ—ಪ್ರಭು, ತಾವು ಆಯಾಸಪಟ್ಟಿರುವಿರಿ, ಕುಟೀರಕ್ಕೆ ದಯಮಾಡೋಣಾಗಲಿ. ಈ ದಾಸಿಯ ಸೇವೆಯನ್ನು ಗ್ರಹಣ ಮಾಡಿ.

ವಸಿ—ಪ್ರಿಯೆ! ಇನ್ನು ಆಶ್ರಮಕ್ಕೆ ಹಿಂದಿರುಗುವುದಿಲ್ಲ. ಈ ಮಹಾಪಾಪಕ್ಕೆ ಪ್ರಾಯಶ್ಚಿತ್ತವಾಗಬೇಕು.

ಅರುಂ—ಏಕೆ? ಏಕೆ? ತಮ್ಮ ಅಪರಾಧವೇನು? ತಾವು ಕೇವಲ ಆತ್ಮರಕ್ಷಣೆಯನ್ನು ಮಾಡಿಕೊಂಡಿರಿ.

ವಸಿಷ್ಠ—ಸಾಧ್ವಿ! ಬ್ರಾಹ್ಮಣರ ನಿಯಮವು ನಿನಗೆ ಗೊತ್ತಿಲ್ಲವೆ? ಬ್ರಾಹ್ಮಣರ ರಕ್ಷಣೆಯ ಭಾರವು ಬ್ರಹ್ಮಣ್ಯ ದೇವನದು. ಸ್ವಯಂ ತಾವೇ ಆತ್ಮರಕ್ಷಣೆ ಮಾಡಿಕೊಳ್ಳಲು ಅಧಿಕಾರವಿಲ್ಲ. ಮಾಯೆ, ಮೋಹಗಳಿಗೆ ಆವಾಸವೂ ಪಾಂಚಭೌತಿಕವೂ ಆದ ಈ ದೇಹ ರಕ್ಷಣೆಗೋಸ್ಕರ ಕೋಟಿ ಕೋಟಿ ನರಹತ್ಯ

ರಾಜಪುತ್ರ ಹತ್ಯೆಗಳನ್ನು ಮಾಡಿ ರಕ್ತದಿಂದ ತಪೋವನವು ಕಲುಷಿತವಾಗುವಂತೆ ಮಾಡಿದೆನಲ್ಲಾ! ಇದಕ್ಕೆ ಪ್ರಾಯಶ್ಚಿತ್ತವಾಗಲೇಬೇಕು. ಇಲ್ಲದಿದ್ದರೆ ವೇದಮಾತೆಯಾದ ಗಾಯತ್ರಿಯು ನನ್ನನ್ನು ಪರಿತ್ಯಾಗ ಮಾಡುವಳು. ತಪಃ ಪ್ರಭಾವದಿಂದ ಜಯಿಸಲಸಾಧ್ಯವಾಗಿರುವ ಮನಸ್ಸನ್ನು ಸಂಪೂರ್ಣವಾಗಿ ಬಿಗಿ ಹಿಡಿಯಲು ಶಕ್ತನಾದರೇನೆ, ನಾನು ವಸಿಷ್ಠನೆಂಬ ಹೆಸರನ್ನು ಹೊಂದಲು ಯೋಗ್ಯನಾಗುವೆನು. ಇಲ್ಲದಿದ್ದರೆ, ತಪ, ಜಪ, ಹೋಮ, ಯಜ್ಞ,-ಎಲ್ಲವೂ ನಿಷ್ಫಲ. ಸಾಧ್ವಿ! ಕಾಮಧೇನು ಸಬಲೆಗೆ ಹೇಳು. ಯೋಗ್ಯನಾದ ತಪಸ್ವಿಯ ಆಶ್ರಯವನ್ನು ಪಡೆಯುವಂತೆ ಹೇಳು. ನನ್ನ ಆಶ್ರಯದಲ್ಲಿ ಅವಳು ಕಲುಷಿತಳಾಗುವಳು.

(ವಸಿಷ್ಠನು ಹೊರಡಲುದ್ಯುಕ್ತನಾಗುವನು)

(ವೇದಮಾತೆಯ ಪ್ರವೇಶ)

ವೇದಮಾತೆ—ವಸಿಷ್ಠ! ಎಲ್ಲಿಗೆ ಹೋಗುವೆ?

ವಸಿಷ್ಠ—ನೀನು ಯಾರಮ್ಮಾ!

ವೇದ—ನಾನು ನಿನ್ನ ಜೊತೆಯಲ್ಲಿಯೇ ಬರುವೆನು. ನನ್ನನ್ನು ಗುರುತು ಹಿಡಿಯಲಾರೆಯಾ? ಕ್ರೋಧಕ್ಕೆ ಈಡಾದ್ದರಿಂದ ಅದರ ಹೊಗೆಯಿಂದ ನಿನ್ನ ದೃಷ್ಟಿ ಶಕ್ತಿಯು ಮಸುಕಾಗಿದೆ. ಆದ್ದರಿಂದಲೇ ಗುರುತು ಹಿಡಿಯಲಾರೆ. ಬ್ರಾಹ್ಮಣನು ಇತರರ ಪಾಪಗಳಿಗೋ

ಸ್ಕರ ಪ್ರಾಯಶ್ಚಿತ್ತ ಮಾಡುವನು. ಇತರರ ಪಾಪಗಳನ್ನು ಗ್ರಹಣ ಮಾಡುವನು. ತನ್ನ ಪಾಪಕ್ಕೆ ಮಾತ್ರ ಕರ್ಮಫಲವನ್ನು ಅನುಭವಿಸುವುದರ ಮೂಲಕ ಶಾಂತಿ ಮಾಡಿಕೊಳ್ಳುವನು. ಬ್ರಾಹ್ಮಣನ ಶಾಂತಿ- ಜ್ಞಾನಾರ್ಜನೆ. ಕರ್ಮಫಲಕ್ಕೆ ಪ್ರತೀಕಾರ ಮಾಡದೆ ಸಹಿಸಿ ಅನುಭವಿಸುವುದು. ನೀನು ಜ್ಞಾನಿಯಾಗಿಯೂ ಆತ್ಮನನ್ನೇಕೆ ಮರೆತೆ? ನಿನ್ನ ಶಾಸ್ತ್ರಾಧ್ಯಯನವೆಲ್ಲವೂ ವ್ಯರ್ಥವೇನು?

ವಸಿಷ್ಠ—ತಾಯಿ, ನಾನು ಜ್ಞಾನಿಯಲ್ಲ. ನಾನು ಮಹಾ ಅಜ್ಞಾನಿ. ನಿನ್ನ ದರ್ಶನದಿಂದ ಜ್ಞಾನಲಾಭವಾದರೂ ಆಗಬಹುದು. ವಿಶ್ವಾಮಿತ್ರನ ನೂರು ಮಂದಿ ಮಕ್ಕಳನ್ನು ಕೊಂದಿರುವೆನು. ನಿಷ್ಪಕ್ಷಪಾತಿಯಾದ ವಿಧಿಯ ನಿಯಮಕ್ಕನುಸಾರವಾಗಿ ಅದಕ್ಕೆ ತಕ್ಕ ಪ್ರತಿಫಲವಾಗುವುದೇ ನ್ಯಾಯ.

ವೇದ—ಹೀಗೆ ತಿಳಿದಿರುವಾಗ ನೀನು ಗೃಹತ್ಯಾಗಿಯಾಗುವುದೇಕೆ?

ವಸಿಷ್ಠ—ಹೌದು, ನಿನ್ನ ದಯೆಯಿಂದ ತಿಳಿಯಿತು. ಕ್ರೋಧಕ್ಕೆ ಸಿಕ್ಕಿ ನಾನು ಕುಲಕ್ಷಯ ಮಾಡಿಕೊಂಡಿರುವೆನು. ಸುಶೀಲೆಯಾದ ಅರುಂಧತಿಯ ಪುಣ್ಯಬಲದಿಂದ ವಂಶ ರಕ್ಷಣೆಯಾದರೆ, ಪಿತೃಗಳ ಪಿಂಡೋದಕ ರಕ್ಷಣೆಯೂ ಆಗುವುದು. ತಾಯಿ, ನಾನು ಮನೆಗೆ ಹೋಗುವೆನು. ಮನಸ್ಸು-ಪಶುವಿಗೆ ಸಮಾನ. ಯಾ

ವಾಗ ಮೋಹಕ್ಕೆ ಆಶ್ರಯ ಕೊಡುವುದೋ ತಿಳಿಯು ಲಾರೆ. ನೀನು ಯಾವಾಗಲೂ ನನ್ನ ಮೇಲೆ ದಯೆ ಯಿಡು. (ವಸಿಷ್ಠನು ಹೊರಟು ಹೋಗುವನು)

ಅರುಂ—ತಾಯಿ, ಕೃಪೆಯಿಟ್ಟು ಪ್ರಸನ್ನಳಾದೆ. ನನ್ನ ಸೇವೆಯನ್ನು ಸ್ವೀಕರಿಸು ಬಾ.

ವೇದ—ನಿನ್ನ ಸೇವೆಯನ್ನು ನಾನು ಯಾವಾಗಲೂ ಗ್ರಹ ಣ ಮಾಡುತ್ತಲೇ ಇರುವೆನು. ನೀನು ಕುಲ ಲಕ್ಷ್ಮೀ. ನೀನು ನಿನ್ನ ಸ್ವಾಮಿಯ ಸೇವೆಯಲ್ಲಿಯೇ ಹಗಲೂ ರಾತ್ರಿ ನಿರತಳಾಗಿರುವೆ. ಇದಕ್ಕಿಂತಲೂ ಪ್ರಿಯವಾದ ಸೇವೆಯು ನನಗೆ ಮತ್ತಾವುದೂ ಇಲ್ಲ.

(ಇಬ್ಬರೂ ಹೊರಟು ಹೋಗುವರು.)

## ಮೂರನೆಯ ನೋಟ.

ಪ್ರಯಾಗ—ತ್ರಿವೇಣೀತೀರ. ವಿಶ್ವಾಮಿತ್ರ.

ವಿಶ್ವಾ—ಈ ನನ್ನ ದಂಭವೂ, ಈ ಶೌರ್ಯವೂ, ಈ ಕ್ಷತ್ರಿ ಯ ಗೌರವವೂ ಒಬ್ಬನೇ ಒಬ್ಬ ಬ್ರಾಹ್ಮಣನ ಪ್ರಭಾ ವದಿಂದ ನಿಷ್ಫಲವಾಗಿಹೋಯಿತು. ಅಸ್ತ್ರವಿಲ್ಲದೆಯೇ ನನ್ನ ನೂರು ಮಂದಿ ಮಕ್ಕಳೂ, ಚತುರಂಗ ಬಲವೂ ಒಂದು ಬ್ರಹ್ಮದಂಡ ಬಲದಿಂದ ನಾಶವಾಗಿವೆ. ಕೈಯಲ್ಲಿ ದಂಡವನ್ನು ಹಿಡಿದು ಶಸ್ತ್ರಧಾರಿಗಳಾದ ನಮ್ಮ ಸೇನೆಯವರನ್ನೂ ನನ್ನನ್ನೂ ಆ ಬಡ ಬ್ರಾಹ್ಮ ಣನು ಸೋಲಿಸಿದನಲ್ಲಾ! ಅವಮಾನ! ಎಂತಹ

ಅವಮಾನ! ಇನ್ನು ಬದುಕಿರಬಾರದು. ಎಲ್ಲರ ಉಪಹಾಸಕ್ಕೂ ಗುರಿಯಾಗಿರುವೆನು. ಈ ಹಾಳು ಪ್ರಾಣವನ್ನು ಬಿಟ್ಟುಬಿಡುವೆನು. ಆಗಲಾದರೂ ಈ ಅಪಮಾನದಿಂದ ಬಿಡುಗಡೆಯನ್ನು ಹೊಂದಬಹುದು. ಈ ತ್ರಿವೇಣಿಯು ಪುಣ್ಯ ತೀರ್ಥವೆಂದು ಕೇಳಿದ್ದೇನೆ. ಇಲ್ಲಿ ದೇಹವನ್ನು ವಿಸರ್ಜನೆ ಮಾಡುವೆನು. ಆದರೆ ಒಂದು ಪ್ರಾರ್ಥನೆಯನ್ನು ಮನಸ್ಸಿನಲ್ಲಿ ಮಾಡಿಕೊಳ್ಳುವೆನು. ಪುನಃ ಹುಟ್ಟುವುದಾದರೆ ನಾನು ಬ್ರಾಹ್ಮಣನಿಗೇ ಔರಸ ಪುತ್ರನಾಗಿಯೇ ಹುಟ್ಟಬೇಕು. ಕ್ಷತ್ರಿಯರ ಬಲಕ್ಕೆ ಶತಧಿಕ್.

(ದುಃಖವನ್ನು ತಾಳಲರಿಯದೆ ನೀರಿನಲ್ಲಿ ಮುಳುಗುವನು)

(ಬಾಲಕ ವೇಷದಲ್ಲಿ ಬ್ರಹ್ಮಣ್ಯದೇವನ ಪ್ರವೇಶ)

ಬ್ರಹ್ಮಣ್ಯ—ಅಯ್ಯೋ! ಏಳು, ಏಳು, ನಡೆನಡೆ, ನನ್ನ ಜೊತೆಯಲ್ಲಿ ಬಾ.

ವಿಶ್ವಾ—ನೀನು ಯಾರಪ್ಪಾ?

ಬ್ರಹ್ಮಣ್ಯ—ನಾನು ಯಾರಾದರೂ ಆಗಲಿ, ನೀನು ಬಾ.

ವಿಶ್ವಾ—ಯಾಕೆ? ನಾನು ನಿನ್ನ ಜೊತೆಯಲ್ಲಿ ಏಕೆ ಬರಬೇಕು?

ಬ್ರಹ್ಮಣ್ಯ—ನಾನು ನಿನ್ನನ್ನು ಸಾಕಿಕೊಳ್ಳುವೆನು.

ವಿಶ್ವಾ—ಸಾಕುವೆಯೇನು?

ಬ್ರಹ್ಮಣ್ಯ—ಸಾಕುವುದೆಂದರೆ ಗೊತ್ತಿಲ್ಲವೇನು? ಕಪಿ,

ಕರಡಿಗಳನ್ನು ಹೇಗೆ ಸಾಕುವರೋ,—

ವಿಶ್ವಾ—ನಾನೇನು ಕಾಡು ಮೃಗವೇನು ?

ಬ್ರಹ್ಮಣ್ಯ—ಕಾಡು ಮೃಗಕ್ಕಿಂತ ಹೆಚ್ಚು. ಕಾಡು ಮೃಗಗಳು ಸಾಯಲು ಆಶೆ ಪಡುವುದಿಲ್ಲ. ನೀನು ಸಾಯಲು ಆಶೆಪಟ್ಟಿರುವೆ.

ವಿಶ್ವಾ—ನಾನು ಸಾಯಬೇಕೆಂದೇನೋ ಇದ್ದೇನೆ. ನಿನಗೆ ಹೇಗೆ ಗೊತ್ತಾಯಿತು ?

ಬ್ರಹ್ಮಣ್ಯ—ನಾನು ನಿನ್ನ ಹಾಗೆ ದುಃಖಿಯಲ್ಲ. ಬೆಳ್ಳೀಗಡ್ಡದ ಬ್ರಾಹ್ಮಣ, ಬುದ್ಧಿಯಿಲ್ಲ, ಜ್ಞಾನವೂ ಇಲ್ಲ. ಕತ್ತನ್ನು ಕೈಯ್ಯಲ್ಲಿ ಹಿಡಿದುಕೊಂಡು ನೀರಿಗೆ ಧುಮುಕಲೇ ಬೇಡವೇ ಎಂದು ಯೋಚಿಸುತ್ತಿದ್ದೀಯಲ್ಲವೆ?

ವಿಶ್ವಾ—ಅಯ್ಯಾ ಬಾಲಕ, ಎಲ್ಲಿಗೆ ಹೋಗುತ್ತಿದ್ದೆಯೋ ಹೋಗು. ನಾನು ಬ್ರಾಹ್ಮಣನಲ್ಲ.

ಬ್ರಹ್ಮಣ್ಯ—ಬ್ರಾಹ್ಮಣನಲ್ಲದಿದ್ದರೆ, ನೀನು ಸತ್ತರೆ ಪ್ರಾಣವನ್ನು ಬಿಟ್ಟರೆ ಬ್ರಾಹ್ಮಣನಾಗುವುದು ಹೇಗೆ ?

ವಿಶ್ವಾ—ನೀನು ಯಾರು? ನನ್ನ ಮನೋಭಾವವು ನಿನಗೆ ಹೇಗೆ ತಿಳಿಯಿತು ?

ಬ್ರಹ್ಮಣ್ಯ—ನೀನೇ ಗಟ್ಟಿಯಾಗಿ ಹೇಳಿಕೊಳ್ಳುತ್ತಿದ್ದೆಯಲ್ಲಾ ? ಹಾಗಿಲ್ಲದಿದ್ದರೆ ಸಾಕುವುದಕ್ಕೋಸ್ಕರ ನಿನ್ನನ್ನು ಹಿಡಿದುಕೊಂಡು ಹೋಗಬೇಕೆಂದು ನಾನೇಕೆ ಬರುತ್ತಿದ್ದೆ ?

ವಿಶ್ವಾ—ನೀನು ಯಾರು?

ಬ್ರಹ್ಮಣ್ಯ—ನಾನು ಯಾರಾದರೇನು? ನಿನ್ನ ಬುದ್ಧಿಯು ಓಡಿ ಹೋದುದನ್ನು ನೋಡಿದೆ. ನೀನು ಬ್ರಾಹ್ಮಣ ನಲ್ಲದಿದ್ದರೆ, ಹೇಗೆ ಬ್ರಾಹ್ಮಣನಾಗುವೆ?

ವಿಶ್ವಾ—ಬ್ರಾಹ್ಮಣನಾಗಿ ಜನ್ಮವೆತ್ತುವೆನು.

ಬ್ರಹ್ಮಣ್ಯ—ಹಾಗಾದರೆ ಏನಾಗುವುದು? ಆಗ್ಯೆ ನಿನಗೆ ನಾಲ್ಕು ಕೈಗಳು ಬರುವುವೇ? ಅಥವಾ ರೆಕ್ಕೆಗಳು ಹುಟ್ಟುವುವೇ? ಈಗ ಕಡಿಮೆಯಾಗಿರುವುದೇನು? ಆಗ ಹೆಚ್ಚುವುದೇನು?

ವಿಶ್ವಾ—ಬಾಲಕ! ನಿನಗೆ ಗೊತ್ತಿಲ್ಲ. ಬ್ರಾಹ್ಮಣರ ಹೊಟ್ಟೆಯಲ್ಲಿ ಹುಟ್ಟದಿದ್ದರೆ ಬ್ರಹ್ಮ ತೇಜಸ್ಸನ್ನು ಹೊಂದುವುದು ಹೇಗೆ?

ಬ್ರಹ್ಮಣ್ಯ—ಅಯ್ಯೋ ದಡ್ಡ ಮನುಷ್ಯ! ನಿನಗೆ ಗೊತ್ತಿಲ್ಲ. ಒಂದು ಬ್ರಹ್ಮತೇಜವಿಲ್ಲದಿದ್ದರೆ ಬದುಕುವುದು ಹೇಗೆ? ಮಾತನಾಡುವುದು ಹೇಗೆ? ಬ್ರಹ್ಮ ತೇಜಸ್ಸಿನಲ್ಲಿಯೇ ಈ ಪ್ರಪಂಚವಿರುವುದು. ಹೋಗು, ಹೋಗು ನಿನ್ನ ಹತ್ತಿರ ನಿಂತುಕೊಂಡಿದ್ದರೆ ಆಗುವುದಿಲ್ಲ. ನಾನು ಹೋಗುತ್ತೇನೆ.

ವಿಶ್ವಾ—ಬಾಲಕ! ನೀನು ಯಾರು? ಬ್ರಾಹ್ಮಣನ ಹೊಟ್ಟೆಯಲ್ಲಿ ಹುಟ್ಟದಿದ್ದರೆ ಬ್ರಾಹ್ಮಣನಾಗುವುದು ಹೇಗೆ?

ಬ್ರಹ್ಮಣ್ಯ—ಏನಪ್ಪಾ ! ಪುನಃ ಹುಚ್ಚನಹಾಗೆ ಮಾತಾಡುತ್ತೀ. ಬ್ರಾಹ್ಮಣನ ಹೊಟ್ಟೆಯಲ್ಲಿ ಹುಟ್ಟಿದರೂ ಚಂಡಾಲನಾಗುವನು. ಬ್ರಾಹ್ಮಣ ಪುತ್ರನಾದ ಗೌತಮನು ಚಂಡಾಲನಾಗಿದ್ದನು. ಅವನ ಕೃತಘ್ನತೆಯಿಂದ ನಾಯಿ ನರಿಗಳುಕೂಡ ಅವನ ಮಾಂಸವನ್ನು ತಿನ್ನಲಿಲ್ಲ. ಬ್ರಾಹ್ಮಣನಿಗೂ ಚಂಡಾಲನಿಗೂ ಭೇದವಿರುವುದು--ಕೆಲಸದಲ್ಲಿ. ಮಾಡತಕ್ಕ ಕೆಲಸದಲ್ಲಿ. ಆತ್ಮನು ಸರ್ವರಲ್ಲಿಯೂ ಸಮಾನ. ಯಾವನು ತಪಸ್ಸಿನಿಂದ ಆತ್ಮನನ್ನು ನೋಡುವನೋ ಅವನೇ ಬ್ರಾಹ್ಮಣ. ಇಲ್ಲದಿದ್ದರೆ ಬ್ರಾಹ್ಮಣನ ಮನೆಯಲ್ಲಿ ಹುಟ್ಟಿ, ಕತ್ತಿನಲ್ಲಿ ಮೂರೆಳೆ ಜನಿವಾರವನ್ನು ಹಾಕಿಕೊಂಡು "ಬ್ರಾಹ್ಮಣ ಬ್ರಾಹ್ಮಣ" ಎಂದು ಕೂಗಿಕೊಂಡರೆ ಬ್ರಾಹ್ಮಣನಾಗುವನೇನು ?

(ಬ್ರಹ್ಮಣ್ಯದೇವನು ಹೊರಟು ಹೋಗುವನು.)

ವಿಶ್ವಾ—ಯಾರು ಬಲ್ಲರು? ಈ ಬಾಲಕನು ಯಾರು? ನಿಜ, ತಪಸ್ಸೇ ಬಲ. ಬ್ರಾಹ್ಮಣರು ಅನೇಕರಿದ್ದಾರೆ. ಆದರೆ ವಸಿಷ್ಠನು ಇಷ್ಟು ತೇಜಸ್ವಿಯಾಗಿರಲು ಕಾರಣವೇನು? ವಸಿಷ್ಠ ತಪಸ್ಸಿನ ಪ್ರಭಾವದಿಂದ ವಸಿಷ್ಠ. ತಪಃ ಪ್ರಭಾವದಿಂದ ನಾನೂ ಬ್ರಾಹ್ಮಣನಾಗುವೆನು. ಇಲ್ಲ. ಅದು ಸಂಭವವೇ? ಎಲ್ಲಿ? ಯಾವ ಕ್ಷತ್ರಿಯನು ತಪಃ ಭಾವದಿಂದ ಬ್ರಾಹ್ಮಣನಾಗಿರುವನು? ಏನಾದರೂ ಆಗಲಿ, ನಾನು ಸಾಯುವುದಿಲ್ಲ. ಯೋಚನೆಮಾಡಿ ನೋಡುವೆನು.

(ಎಂದು ಹೊರಟು ಹೋಗುವನು.)

## ಕನ್ಯಾಕುಬ್ಜ—ಅಲಂಕೃತವಾದ ನಗರ.

[ವಂದಿಮಾಗಧರು ಬರುವರು]

ವಂಧಿಮಾಗಧ—ಮಹಾರಾಜಾಧಿರಾಜನಾದ ವಿಶ್ವಾಮಿತ್ರನು ದಿಗ್ವಿಜಯ ಮಾಡಿಕೊಂಡು ರಾಜಧಾನಿಗೆ ಹಿಂದಿರುಗುವನು. ಏಳುದಿನ ಹಗಲೂ ರಾತ್ರಿ ಎಲ್ಲರೂ ಆನಂದೋತ್ಸವ ಮಾಡಬೇಕೆಂದು ಮಹಾರಾಣಿಯ ಅಪ್ಪಣೆಯಾಗಿರುವುದು. ರಾಜ್ಯಕೋಶದಿಂದ ಉತ್ಸವದ ಖರ್ಚೆಲ್ಲಾ ಕೊಡಲ್ಪಡುವುದು. ಜಯ! ಮಹಾರಾಜ ವಿಶ್ವಾಮಿತ್ರನಿಗೆ ಜಯವಾಗಲಿ.

(ಮಂತ್ರಿಯೂ ನಗರರಕ್ಷಕರೂ ಎರಡು ಕಡೆಯಿಂದ ಪ್ರವೇಶ)

ಮಂತ್ರೀ—ಎಲೈ ನಗರ ರಕ್ಷಕನೇ ? ಭಯಾನಕ! ಪಟ್ಟಿತಿಂದ ಸೇನಾನಾಯಕನು ಬಂದು "ತಪೋವನದಲ್ಲಿ ಮಹಾರಾಜನು ವಸಿಷ್ಠರೊಡನೆ ಯುದ್ಧಮಾಡಿ ಸೋತು ಎಲ್ಲಿಯೋ ಹೊರಟು ಹೋದನು. ಎಷ್ಟು ಹುಡುಕಿದರೂ ಮಹಾರಾಜನು ಸಿಕ್ಕಲಿಲ್ಲ. ಅವನು ಹೋಗಿರುವ ಸ್ಥಳವೂ ತಿಳಿಯಲಿಲ್ಲ" ಎಂದು ಹೇಳಿದನು. ಉತ್ಸವವನ್ನು ನಿಲ್ಲಿಸಿಬಿಡು. ಎಲ್ಲಾ ದಿಕ್ಕುಗಳಿಗೂ ದೂತರನ್ನು ಕಳುಹಿಸು. ಮಹಾರಾಜನು ಇರುವ ಸ್ಥಳವನ್ನು ತಿಳಿಸತಕ್ಕವರಿಗೆ, ಒಂದುಕೋಟಿ ಸುವರ್ಣ ಮುದ್ರೆಗಳು ಬಹುಮಾನವಾಗಿ ಕೊಡಲ್ಪವುವೆಂದು ಡಂಗುರ ಹಾಕಿಸು.

ನಗರರಕ್ಷಕ—ಅಪ್ಪಣೆ! ಇದೇನು ಸರ್ವನಾಶ ವೊದಗಿತು!

ಮಂತ್ರೀ—ಹೊರಡಬೇಕು! ನಿಧಾನ ಮಾಡಬೇಡ. ತಡ ಮಾಡಲು ಅವಕಾಶವಿಲ್ಲ. ಸ್ವಲ್ಪವೂ ವಿಳಂಬ ಮಾಡಬೇಡ. ಕೂಡಲೇ ನಾಲ್ಕುದಿಕ್ಕಿಗೂ ದೂತರನ್ನು ಕಳುಹಿಸು.

(ನಗರ ರಕ್ಷಕನು ಹೊರಟು ಹೋಗುವನು)

(ಸುನೇತ್ರೆಯ ಪ್ರವೇಶ)

ಮಂತ್ರೀ—ಇದೇನು ತಾಯಿ? ತಾವು ಇಲ್ಲಿಗೆ ದಯಮಾಡಿರುವಿರಿ?

ಸುನೇತ್ರೆ—ಮಹಾರಾಜರು ಬರಲಿಲ್ಲ. ವತ್ಸ! ರಾಜ್ಯದ ಮೇಲ್ವಿಚಾರಣೆಯನ್ನು ನಿನಗೆ ವಹಿಸಬೇಕೆಂದು ಬಂದೆನು. ಬಾಲಕನಾದ ರಾಜಕುಮಾರನ ಹೆಸರಿನಲ್ಲಿ ರಾಜ್ಯಭಾರವನ್ನು ನಡೆಯಿಸಿ ರಾಜಕಾರ್ಯಗಳನ್ನು ನಿರ್ವಹಿಸು. ನಾನು ಪತಿಯನ್ನು ಹುಡುಕಿಕೊಂಡು ಹೊರಡುವೆನು.

ಮಂತ್ರೀ—ಏನುತಾಯಿ! ಮಹಾರಾಣಿಯಾಗಿ ತಾವೆಲ್ಲಿ ಹೋಗುವಿರಿ?

ಸುನೇತ್ರೆ—ಇನ್ನು ನಾನು ಮಹಾರಾಣಿಯಲ್ಲ. ಪತಿಯು ಗೃಹತ್ಯಾಗಿಯಾದರೆ ಸತಿಯು ಹೇಗೆತಾನೇ ಗೃಹದಲ್ಲಿರುವಳು? ಪತಿಯ ವಸತಿಯೇ ಸತಿಗೂ ವಸತಿ. ಇನ್ನು ನಗರದಲ್ಲಿರಲಾರೆ. ನೂರುಮಂದಿ ಮಕ್ಕಳೂ

ಹತರಾದರು. ರಾಜರಾಜೇಶ್ವರನು ನಿರುದ್ದೇಶನಾಗಿ ಕಾಡಿನಲ್ಲಿ ಅಲೆಯುತ್ತಿರುವನು. ನೀನು ಬುದ್ಧಿವಂತ. ಸತಿಯ ಕರ್ತವ್ಯವು ನಿನಗೆ ತಿಳಿಯದ್ದಿಲ್ಲ. ವತ್ಸ! ಹೋಗಿ ಬರುವೆನು. ಆದರೆ ಪತಿಯೊಡನೆ ನಗರಕ್ಕೆ ಹಿಂದಿರುಗುವೆನು. ಇಲ್ಲದಿದ್ದರೆ ನನಗೆ ರಾಜ್ಯವೇಕೆ? ನನಗೆ ಸಂಸಾರವೆಲ್ಲಿಯದು?

ಮಂತ್ರೀ—ತಾಯಿ! ಶೀಘ್ರಗಾಮಿಗಳಾದ ಬುದ್ಧಿವಂತ ದೂತರನ್ನು ಎಲ್ಲಾ ದಿಕ್ಕುಗಳಿಗೂ ಕಳುಹಿಸಿರುವೆನು. ರಾಜರ ಸಮಾಚಾರವನ್ನು ತಿಳಿದು ಕೂಡಲೆ ಹಿಂದಿರುಗುವರು. ಮಹಾರಾಣಿಯು ಇಷ್ಟು ಕಾತರಳಾಗುವುದೇಕೆ? ತಾಯಿ! ತಾವು ಒಬ್ಬಂಟಿಗರಾಗಿ ಹೀಗೆ ಹೊರಡುವುದು ಸರಿಯೆ?

ಸುನೇತ್ರೆ—ಯಾವ ದೂತರು ತಾನೇ ನಿಜವಾದ ಸಮಾಚಾರವನ್ನು ತರಬಲ್ಲರು? ಯಾರುತಾನೇ ರಾಜನನ್ನು ಹಿಂದಿರುಗಿಸಬಲ್ಲರು? ರಾಜನು ಎಲ್ಲಿರುವನೆಂದು ಬಲ್ಲೆಯೊ? ಅವನೇಕೆ ನಿರುದ್ದೇಶನಾಗಿರುವನೆಂಬುದನ್ನು ತಿಳಿದೆಯಾ? ನಾನುಕಂಡ ಸ್ವಪ್ನಗಳು ಸುಳ್ಳಾಗುವುದಿಲ್ಲ. ನಾನು ನೆನ್ನೆರಾತ್ರಿ ಕಂಡ ಸ್ವಪ್ನವನ್ನು ಹೇಳುತ್ತೇನೆ ಕೇಳು. ಮಹಾರಾಜನು ಘೋರವಾಗಿ ಯುದ್ಧಮಾಡಿ, ತಪಸ್ವಿಯ ವೇಷದಿಂದ ಘೋರ ವನವನ್ನು ಪ್ರವೇಶ ಮಾಡಿದ್ದನ್ನು ಕಂಡೆನು. ನಾನು ಕಂಡ ಸ್ವಪ್ನವು ಸುಳ್ಳಲ್ಲ. ಬಂದಿರುವ ಸಮಾಚಾರವೇ ಅದಕ್ಕೆ ನಿದರ್ಶನ. ಯಾವ ತೇಜಸ್ಸಿನಿಂದ ತಾನು

ಸೋತನೋ ಅಂತಹ ಬ್ರಹ್ಮತೇಜಸ್ಸನ್ನು ಸಂಪಾದಿಸಬೇಕೆಂದೇ ನರಪತಿಯು ತಪಸ್ಸುಮಾಡಲು ಹೊರಟಿರುವನು. ಈಗ ನಾನು ತಪಸ್ವಿನೀ. ಮಹಾರಾಣಿಯಲ್ಲ. ಸ್ವಪ್ನದಲ್ಲಿ ಸಮಾಚಾರವನ್ನು ತಿಳಿಸಿದ ತಾಯಿ! ದಾರಿತೋರಿಸು! ನಡೆ ತಾಯಿ! ಭೂಪಾಲನಿರುವಲ್ಲಿಗೆ ದಾರಿ ತೋರಿಸು. (ಸುನೇತ್ರೆಯು ಹೊರಟು ಹೋಗುವಳು)

ಮಂತ್ರೀ—ಇದೇನು ವಿಪತ್ತಿನಮೇಲೆ ವಿಪತ್ತು. ಈ ಹುಚ್ಚಿಯನ್ನು ನಿಲ್ಲಿಸಲಾರೆನಲ್ಲಾ! ನಾನೇ ಸ್ವಯಂ ರಕ್ಷಕನಾಗಿ ಇವಳಿಗೆ ತಿಳಿಯದಂತೆ ಇವಳ ಹಿಂದೆಯೇ ಹೋಗುವೆನು. ಇದಲ್ಲದೆ ಮತ್ತಾವ ಉಪಾಯವೂ ತೋರುವುದಿಲ್ಲ. (ಮಂತ್ರಿಯು ಹೊರಟು ಹೋಗುವನು.)

**ವನಪಥ.**

ಬ್ರಹ್ಮಣ್ಯದೇವನು ಮರವನ್ನೊರಗಿಕೊಂಡು
ನಿಂತಿರುವನು.

(ಸದಾನಂದನ ಪ್ರವೇಶ.)

ಸದಾ—ಈ ಕಡೆಯಿಂದ ರಾಜನು ಬರುತ್ತಿದ್ದನು. ಎಲ್ಲಿ ಹೋದನು? ಎಷ್ಟು ಪ್ರಯತ್ನಪಟ್ಟರೂ ಅವನನ್ನು ಹಿಂದಿರುಗಿಸಲಾಗಲಿಲ್ಲ. ಎಂತಹ ವಿಷಮ ವಿಪತ್ತು. ಹಾಲು, ಮೊಸರು, ಬೆಣ್ಣೆ ಇವುಗಳ ಭಿಕ್ಷೆಯು ನಡೆದು ಬಹಳ ದಿನಗಳಾಗಿ ಹೋದವು. ವಿದ್ಯಾಶೂನ್ಯ

ರಾದ ವೈದಿಕರಿಗೆ ಭಿಕ್ಷೆಯು ಹೇಗೆ ನಡೆಯುವುದು? ಒಂದೆರಡು ಶ್ಲೋಕಗಳನ್ನು ಕೂಡ ಕಲಿತುಕೊಳ್ಳಲಿಲ್ಲ. ಹಿಂದಿರುಗಿ ಗೌರವಸ್ತನಾಗಿ ಎಲ್ಲಿಯಾದರೂ ಭಿಕ್ಷೆ ಮಾಡಿ ತರಬೇಕು. ಮಹಾರಾಜನು ಎತ್ತ ಕಡೆಹೋದ ನೆಂದು ಈ ಬಾಲಕನನ್ನು ಕೇಳುವೆನು. ಅಯ್ಯಾ, ಬಾಲಕ!

ಬ್ರ—ಏನು?

ಸದಾ—ಈಕಡೆ ಯಾರಾದರೂ ಹೋದದ್ದನ್ನು ನೋಡಿ ದೆಯೊ!

ಬ್ರ—ಎಷ್ಟುಜನ ಬರುತ್ತಾರೆ, ಎಷ್ಟುಜನ ಹೋಗು ತ್ತಾರೆ. ಲೆಕ್ಕವನ್ನು ಯಾರು ಇಟ್ಟಿದ್ದಾರೆ? ನಾನು ಭೋಜನಾನಂದಶರ್ಮಾ. ಈಗತಾನೇ ಊಟಮಾಡಿ ಸ್ವಲ್ಪ ವಿಶ್ರಮಿಸಿಕೊಳ್ಳುತ್ತಿದ್ದೇನೆ. ನೀನುಯಾರು?

ಸದಾ—ನಾನೂ ಭೋಜನಾನಂದಶರ್ಮಾ. ಆದರಿಂ ದಲೇ ಊಟಮಾಡದೆ ಅತ್ತಿತ್ತ ಸುತ್ತುತ್ತಿರುವೆನು.

ಬ್ರ—ಒಳ್ಳೆಯದು!

ಸದಾ—ನಿನಗಂತೂ ಒಳ್ಳೆಯದು. ನನಗೇನು ಒಳ್ಳೆ ಯದು? ಹೇಳು, ನೋಡೋಣ.

ಬ್ರ—ಇದೀಗ ಚೆನ್ನಾಯಿತು. ನೋಡು-ಹೋಗಬೇಡ. ನಿನ್ನ ಜೊತೆಯಲ್ಲಿ ಸ್ವಲ್ಪಸುತ್ತಿ ವಿಚಾರ ಮಾಡುವೆನು. ಹತ್ತು ಜನಗಳು ತಿನ್ನುವಷ್ಟು ತಿನ್ನಬೇಕು.

ಸದಾ—ಪುನಃ ಸುತ್ತುವುದೇಕೆ? ಇಲ್ಲಿ ವಿಶ್ರಮಿಸಿಕೊಳ್ಳುವುದೇ ಬೇಡ. ನಡೆ.

ಬ್ರ—ನೀನು ನನಗೆ ಪ್ರತಿನಿಧಿಯಾಗಿ ಹೋಗಬಲ್ಲೆಯಾ?

ಸದಾ—ಓಹೋ! ನಿಶ್ಚಯವಾಗಿಯೂ ಪ್ರತಿನಿಧಿಯಾಗಬಲ್ಲೆ. ಪರೀಕ್ಷೆಮಾಡಿದರೆ ಗೊತ್ತಾಗುವುದು.

ಬ್ರ--ಇಲ್ಲಪ್ಪಾ-ಇಲ್ಲ. ನನ್ನ ಕೆಲಸವಲ್ಲ. ಅಮ್ಮಣ್ಣಮ್ಮನು ಋಷಿಪಂಚಮಿ ಉದ್ಯಾಪನೆ ಮಾಡುತ್ತಾಳೆ. ಹತ್ತುಸೇರು ಹಾಲನ್ನು ತರಿಸಿ ನನಗೋಸ್ಕರ ಖೀರು ಮಾಡಿದ್ದಾಳೆ. ಅದನ್ನು ಸ್ವಲ್ಪ ರುಚಿನೋಡಬೇಕಾಗಿದೆ. ರಾಮಯ್ಯನ ತಂದೆಯ ಶ್ರಾದ್ಧ. ಅಲ್ಲಿ ಹತ್ತು ಜೊತೆ ತೇಂಗೊಳಲು, ಇನ್ನುಹತ್ತುಜೊತೆ ಸಿಗ್ಗಿನುಂಡೆ, ಮೇಲೆ ಹತ್ತುಜೊತೆ ಅತ್ತಿರಸ ಇಳಿಸಬೇಕು. ನಾರಾಯಣನ ಕೊನೆಯ ಮಗನಿಗೆ ಮುಂಜಿ. ಅಲ್ಲಿ ಫಲಾಹಾರಕ್ಕೆ ಹನ್ನೆರಡುಜೊತೆ ಸಕ್ಕರೆ ಒಬ್ಬಟ್ಟು.

ಸದಾ—ಸಾಕು ಅಣ್ಣಾ! ಇನ್ನು ಸುಮ್ಮನೆ ಹೇಳಬೇಡ ಸಾಕು. ನಿನಗೆಲ್ಲಿ ಮನಸ್ಸು ಬರುತ್ತೋ ಅಲ್ಲಿ ನನ್ನನ್ನು ಪರೀಕ್ಷೆ ಮಾಡಿನೋಡು.

ಬ್ರ—ಹಾಗಾದರೆ ನನ್ನ ಜೊತೆಯಲ್ಲಿ ಸುತ್ತುವುದಕ್ಕೆ ಹೊರಡು. ಷೋಡಶೋಪಚಾರದ ಭೋಗ. ಎಷ್ಟು ಸಾಧ್ಯವೋ ಅಷ್ಟುತಿನ್ನು.

ಸದಾ—ಷೋಡೋಪಚಾರ ಆಮೇಲೆ ಆಗುತ್ತೆ. ಈಗ ಒಂದೇ ಉಪಚಾರ ಸಾಕು. ಹತ್ತಿರದಲ್ಲಿ ಎಲ್ಲಿಯಾ

ದರೂ ಇದೆಯೋ? ಹಾಗಿದ್ದರೆ, ಸ್ವಲ್ಪ ಏನಾದರೂ ಮಾಡಿಕೊಡು ಒಂದುಸಲ ರಾಜನನ್ನು ಹುಡುಕಿ ನೋಡುತ್ತೇನೆ.

ಬ್ರ—ರಾಜನನ್ನು ಏಕೆ ಹುಡುಕುತ್ತೀಯೆ ? ಅವನು ಬ್ರಾಹ್ಮಣನಾಗಬೇಕೆಂಬ ಹುಚ್ಚಿನಿಂದ ಸುತ್ತುತ್ತಿದ್ದಾನೆ.

ಸದಾ—ಕಷ್ಟ! ಕಷ್ಟ! ದೇವರೆ! ರಾಜನ ಮಗನಿಗೆ ಇಂತಹ ದುರ್ಬುದ್ಧಿಯನ್ನೇಕೆ ಕೊಟ್ಟೆ!

ಬ್ರ—ಏಕೆ? ಬ್ರಾಹ್ಮಣನಾಗುತ್ತಾನೆ. ದುರ್ಬುದ್ಧಿಯೇನು ಬಂತು?

ಸದಾ—ಅಣ್ಣಾ! ಎಲ್ಲರಿಗೂ ನಿನ್ನಹಾಗೆ ಒಳ್ಳೆಯ ಅದೃಷ್ಟವಿರುವುದಿಲ್ಲ. ಅಮ್ಮಣ್ಣಮ್ಮನು ನಾನಿರುವ ದಿಕ್ಕಿಗಾದರೂ ಖೀರನ್ನು ತೆಗೆದಿಡುವಳೆ? ಹೊಟ್ಟೆಯ ಹಸಿವೆಯಿಂದ ಸಂಕಟ ಪಡುತ್ತಿದ್ದೇನೆ.

ಬ್ರ—ಇಲ್ಲ. ಅವನು ಕೇಳುವುದಿಲ್ಲ. ಅವನು ಬ್ರಾಹ್ಮಣನಾಗಿಯೇ ಆಗುವನು.

ಸದಾ—ಈ ವಸಿಷ್ಠನ ಆಶ್ರಮಕ್ಕೆ ಪ್ರವೇಶಮಾಡಿದಾಗಲೆ ಶನಿ ದೃಷ್ಟಿಯು ಬಿದ್ದಿತು.

ಬ್ರ—ಈಗೇನು ಮಾಡುತ್ತೀ? ನಿಮ್ಮ ರಾಜನು ಬ್ರಾಹ್ಮಣನಾಗದೇ ಬಿಡುವುದಿಲ್ಲ.

ಸದಾ—ಆದರೆ ಆಗಲಿ. ಅದೂ ಸಂತೋಷವೇ. ಮನೆಯಲ್ಲಿದ್ದುಕೊಂಡು ಬ್ರಾಹ್ಮಣನಾಗಲಿ.

ಬ್ರ—ಹಾಗಾದರೆ ಜನರು ಬ್ರಾಹ್ಮಣನಾದನೆಂದು ಗೌರವಿಸುವರೇನು ?

ಸದಾ—ಗೌರವಿಸದೇ ಇದ್ದರೇ ಒಳ್ಳೆಯದು. ಗೌರವಿಸಿದರೆ ಯಾರಾದರೂ ಬಂದು "ಸ್ವಾಮಿ! ಈದಿನ ಉಪಾಸವಿರಿ. ರಾತ್ರಿಗೆ ಲಕ್ಷ್ಮೀಪೂಜೆಯನ್ನು ಮಾಡಬೇಕು" ಎಂದು ಹೇಳುತ್ತಾರೆ. ಕೆಲವರು ಬಂದು "ನಮ್ಮ ತಂದೆಗಳ ಶ್ರಾದ್ಧಕ್ಕೆ ತಾವು ಬರಬೇಕು" ಎಂದು ಅಪ್ಪಣೆಮಾಡಿ ಹೋಗುತ್ತಾರೆ. ಸಾಕಪ್ಪಾ, ಸಾಕು. ಹೊಟ್ಟೆ ಉರಿದುಕೊಂಡು ಬರುತ್ತೆ. ಅಲ್ಲದೆ ಸಂಧ್ಯಾವಂದನೆ ಮಾಡದೆ ಬಾಯಿಗೆ ಒಂದು ಚೂರೂ ಹಾಕುವುದಕ್ಕಿಲ್ಲ. ಚಳಿಯಿಲ್ಲ ಮಳೆಯಿಲ್ಲ, ಹೊಳೆಯಲ್ಲಿ ಮುಳುಗಬೇಕು. ಎಷ್ಟೇ ಕಡಿಮೆ ಎಂದರೂ ಐವತ್ತುಸಲ ನಮ್ಮ ಪಿತೃಗಳಿಗೆ ತರ್ಪಣಕೊಡಬೇಕು. ಯಾರಿಗೆ ಸ್ವಲ್ಪ ಬುದ್ಧಿ ಕಡಿಮೆಯೋ ಅವರು ಈ ಗಡಿಬಿಡಿ ಕೆಲಸಕ್ಕೆ ಬ್ರಾಹ್ಮಣನಾಗುವುದಕ್ಕೆ ಪ್ರಯತ್ನಪಡುತ್ತಾರೆ.

ಬ್ರ—ಏಕಯ್ಯಾ ? ನೀನೂ ಬ್ರಾಹ್ಮಣನಲ್ಲವೆ ?

ಸದಾ—ಈಗ ಕೀಳು ಜಾತಿಯವನಾಗಲು ಸಮಯವಲ್ಲ. ಏನು ಮಾಡೋಣ ಹೇಳು? ಈಗ ಹೊರಟು ಹೋಗಬೇಡ. ನಿಮ್ಮ ಅಮ್ಮಣ್ಣಮ್ಮನು ಎಲ್ಲಿದ್ದಾಳೆ ? ಒಂದುಸಲ ಹಾಗೆ ಸುತ್ತಿಕೊಂಡು ನೋಡಿ ಬರೋಣ. ಭಯಪಡಬೇಡ. ನಾನು ಸ್ವಲ್ಪ ಸ್ವಲ್ಪವೇ ರುಚಿನೋಡಿ

ಬಿಟ್ಟುಬಿಡುತ್ತೇನೆ. ಎಲ್ಲವನ್ನೂ ಮುಗಿಸಿಬಿಡುವುದಿಲ್ಲ.

ಬ್ರ—ನಡೆ. ನಿನಗೆ ಊಟಮಾಡಿಸಿ ಕರೆದುಕೊಂಡು ಬರುತ್ತೇನೆ. ನಿನಗೆ ರಾಜನನ್ನು ಹಿಂದಿರುಗಿಸಬೇಕೆಂಬ ಆಶೆಯಿದೆಯೇ?

ಸದಾ—ಇದೆ.

ಬ್ರ—ಹಾಗಿದ್ದರೆ ಒಂದು ಕೆಲಸಮಾಡು. ಕೆಲವುಮಂದಿ ಋತ್ವಿಕ್ಕುಗಳನ್ನು ಸೇರಿಸು. ಹೋಮಕ್ಕೆ ಅಗ್ನಿಯನ್ನು ಹತ್ತಿಸಿ ತಕ್ಷಣವೇ ಬ್ರಾಹ್ಮಣನಾದೆಯೆಂದು ಅವರೆಲ್ಲಾ ಹೇಳಿದರೆ ನಿನ್ನ ಸ್ನೇಹಿತನು ನಿನ್ನೊಡನೆ ಸಂತೋಷದಿಂದ ಹಿಂದಿರುಗುವನು.

ಸದಾ—ನೀನು ಹೇಳಿದ್ದೇನೂ ಕೆಟ್ಟದಲ್ಲ. ನಿನ್ನ ಯುಕ್ತಿಯಂತೆ ಕೆಲಸ ಮಾಡಬಹುದು ಸರಿ. ಋತ್ವಿಕ್ಕುಗಳನ್ನು ಸೇರಿಸುವವರಾರು?

ಬ್ರ—ಅದಕ್ಕೆಲ್ಲಾ ಯೋಚಿಸಬೇಡ. ನಾನು ಋತ್ವಿಕ್ಕರನ್ನು ಸೇರಿಸಿಕೊಡುತ್ತೇನೆ. ಈಗ ಬಾ. ಹಾಲನ್ನು ಕುಡಿಯುವೆಯಂತೆ ಬಾ, ಹೋಗೋಣ.

ಸದಾ—ಇಲ್ಲ ಇಲ್ಲ. ಸ್ವಲ್ಪ ನಿಲ್ಲು. ನಿಲ್ಲು! ಇದೋ ರಾಜನು ಬರುತ್ತಿದ್ದಾನೆ. ಹುಚ್ಚನಲ್ಲವೆ? ಏನೋ ಯೋಚಿಸುತ್ತಿರಬಹುದು?

(ವಿಶ್ವಾಮಿತ್ರನ ಪ್ರವೇಶ)

ವಿಶ್ವಾ—ಹುಡುಗನು ಹೇಳಿದ್ದು ಸಂಗತವಾದದ್ದು. ತಪೋಬಲವಿದ್ದರೆ ಏನುತಾನೇ ಅಸಾಧ್ಯ! ತಪಸ್ಸಿ

ನಿಂದ ಬ್ರಾಹ್ಮಣ್ಯವು ದೊರೆಯುವುದು. ಹೇಗೆತಾನೇ ನಾನು ಬ್ರಾಹ್ಮಣನಾಗುವುದಿಲ್ಲ? (ಸುತ್ತಲೂನೋಡಿ) ಈ ಸ್ಥಾನವು ನಿರ್ಜನವಾಗಿದೆ. ಇಲ್ಲಿ ಘೋರತಪೋ ವ್ರತವನ್ನು ಕೈಗೊಳ್ಳುವೆನು. ಅನ್ನಾಹಾರಗಳಿಲ್ಲದೆ ವಾಯ್ವಾಹಾರಿಯಾಗಿ ಮಹಾಧ್ಯಾನದಲ್ಲಿ ಮಗ್ನನಾಗುವೆನು.

ಸದಾ—ಮಹಾರಾಜ—ಮಹಾರಾಜ—

ವಿಶ್ವಾ—ಏನಯ್ಯಾ ! ಸದಾನಂದ ! ನನ್ನನ್ನೇಕೆ ಹಿಂಬಾಲಿಸುತ್ತಿರುವೆ ?

ಸದಾ—ಮಹಾರಾಜ ! ನೀನು ಬ್ರಾಹ್ಮಣನಾಗುತ್ತೀಯೆಂದು ಕೇಳಿದೆ. ರಾಜ್ಯಕ್ಕೆ ಹಿಂದಿರುಗಿ ಬ್ರಾಹ್ಮಣನಾದರೆ ಆಗುವುದಿಲ್ಲವೇನು ?

ವಿಶ್ವಾ—ಮಿತ್ರನೆ ! ಆಗುವುದಿಲ್ಲ. ರಾಜ್ಯದಿಂದ ನನಗೆ ಪ್ರಯೋಜನವಿಲ್ಲ. ರಾಜ್ಯಕ್ಕೆ ಧಿಕ್ ! ಐಶ್ವರ್ಯಕ್ಕೆ ಧಿಕ್ ! ತಪಸ್ಸಿನ ಪ್ರಭಾವವೆಂಥದೋ ! ತಪಸ್ಸನ್ನು ಮಾಡಿ ನೋಡುವೆನು.

ಸದಾ—ರಾಜಧಾನಿಯಲ್ಲಿ ಅರಮನೆಯಲ್ಲಿ ಬಾಗಿಲುಗಳನ್ನು ಹಾಕಿಕೊಂಡು ತಪಸ್ಸುಮಾಡಿ ನೋಡಬಾರದೇ ? ದಯಮಾಡು- ಹಿಂದಿರುಗು.

ವಿಶ್ವಾ—ಅಯ್ಯಾ ಬ್ರಾಹ್ಮಣನೇ ! ಕೇಳು. ನಾನು ಆಹಾರ ನಿದ್ರೆಗಳನ್ನು ತೊರೆದು ಹಗಲೂ ರಾತ್ರಿ ತಪಸ್ಸನ್ನು ಮಾಡುವೆನು. ನನ್ನ ಮನಸ್ಸಿನ ಆಸೆಯು—

ಇಷ್ಟಾರ್ಥವು ಸಿದ್ಧಿಯಾದರೆ, ಆಗತಾನೇ ಜೀವನವು ಸಾರ್ಥಕ. ಇಲ್ಲದಿದ್ದರೆ ಈ ದೇಹಭಾರವನ್ನು ವಹಿಸುವುದು ಅನಾವಶ್ಯಕ.

ಸದಾ—ಮಹಾರಾಜ! ಈ ಕೆಲಸಕ್ಕೋಸ್ಕರ ಕಾಡಿನಲ್ಲಿ ಘೋರ ಮೃಗಗಳ ಮಧ್ಯದಲ್ಲಿ ವಾಸ ಮಾಡುವುದು ಅವಶ್ಯಕವೇ? ಸೊಳ್ಳೆ ನೊಣಗಳ ಹಿಂಸೆಯನ್ನು ತಡೆಯಲು ಸೊಳ್ಳೆತೆರೆ ಮುಂತಾದವು ಯಾವುವೂ ಇಲ್ಲ. ಅರಮನೆಯಲ್ಲಿ ಬಾಗಿಲುಗಳನ್ನು ಹಾಕಿಸಿದರೆ ನಿರ್ಜನವಾಗುವುದು. ಅಲ್ಲದೆ ಆಹಾರಾದಿಗಳನ್ನು ಬಿಟ್ಟುಬಿಡಬೇಕೆನ್ನುವೆ. ರಾಜಭೋಗವು ಇರುವುದು ಎನ್ನುವುದಾದರೆ ನಾನು ಹಾಜರಿರುತ್ತೇನೆ. ಎಲ್ಲವನ್ನೂ ಹಿಂದಕ್ಕೆ ಕಳುಹಿಸುತ್ತೇನೆ. ನೀನು ಸುಖವಾಗಿರಬಹುದು. ನಡೆ, ರಾಜ್ಯಕ್ಕೆ ಹಿಂದಿರುಗು.

ವಿಶ್ವಾ—ಸಖನೆ! ಬ್ರಾಹ್ಮಣರ ವಂಶದಲ್ಲಿ ಹುಟ್ಟಿ ಬ್ರಾಹ್ಮಣರ ಮಾಹಾತ್ಮ್ಯವೇ ನಿನಗೆ ತಿಳಿಯದಿರಲು ಕಾರಣವೇನು? ಐಶ್ವರ್ಯದಿಂದೇನು? ರಾಜ್ಯದಿಂದೇನು? ಧನಜನಗಳಿಂದೇನು? ವಸಿಷ್ಠರ ಆಶ್ರಮದಲ್ಲಿ ಬ್ರಾಹ್ಮಣರ ಪ್ರಭಾವವನ್ನು ನೀನೇ ಕಣ್ಣಾರ ನೋಡಿರುವೆ. ನೂರುಮಂದಿ ಪುತ್ರರು, ಚತುರಂಗ ಬಲ, ಇವಿಷ್ಟಿದ್ದರೂ ವಸಿಷ್ಠನನ್ನು ಗೆಲ್ಲಲಾರದೆ ಹೋದೆ. ಅಪಮಾನದಿಂದ ಪ್ರಾಣವು ಸುಡುತ್ತಿದೆ. ಬ್ರಾಹ್ಮಣನು ಅತಿ ಉಚ್ಚಸ್ಥಾನದಲ್ಲಿರುವನು. ಆ ಉಚ್ಚಸ್ಥಾನವನ್ನು ನಾನು ಸಂಪಾದಿಸಿದರೆ, ತರು

ವಾಯ ನಾನು ರಾಜಧಾನಿಗೆ ಹಿಂದಿರುಗುವೆನು. ಇಲ್ಲ, ಇಲ್ಲ. ನಾನು ಸಂಸಾರ ಸಂಬಂಧದಲ್ಲಿ ಬದುಕುವುದಿಲ್ಲ. ತಪಸ್ಸು- ಶುದ್ಧ ತಪಸ್ಸು- ಬರೀ ತಪಸ್ಸೇ ಮನುಷ್ಯನ ಐಶ್ವರ್ಯ.

(ವಿಶ್ವಾಮಿತ್ರನು ಹೊರಟು ಹೋಗುವನು.)

ಸದಾ—ಬಾಲಕನೆ! ಈಗೇನು ಮಾಡಲಿ? ಹೇಳು. ಹಸಿವೆ. ಹೊಟ್ಟೆ ಹಸಿವೆಯಿಂದ ಬುದ್ಧಿಯು ಸರಿಯಾಗಿಲ್ಲ. ಈಗ ರಾಜನ ಹಿಂದೆ ಹೋಗಲೇ? ಅಥವಾ ನಿನ್ನ ಹಿಂದೆ ಅಮ್ಮಣ್ಯಮ್ಮನ ಮನೆಗೆ ಬರಲೇ?

ಬ್ರಹ್ಮ—ನೀನು ನನ್ನ ಜೊತೆಯಲ್ಲಿ ಬಾ! ನಾನೊಂದುಪಾಯ ಮಾಡುವೆನು. ನಿಮ್ಮ ರಾಜನಿಗೆ ತಕ್ಕ ಋತ್ವಿಕ್ಕನ್ನು ಕರಿಸಿಕೊಡುವೆನು.

ಸದಾ—ಬಾಲಕ! ನೀನು ಬಹಳ ಬುದ್ಧಿವಂತ. ನನ್ನ ಹೊಟ್ಟೆ ಹಸಿವನ್ನು ಅಡಗಿಸುವ ಏರ್ಪಾಡನ್ನು ಮಾಡು, ನಡೆ. ಎಲ್ಲಿಯಾದರೂ ನಾನು ಹೇಳಿದೆನಲ್ಲಾ-ನನ್ನನ್ನು ಪರೀಕ್ಷೆಮಾಡು, ನೋಡು. ರಾಜನ ಜೊತೆಯಲ್ಲಿರೋಣವೆಂದರೆ ಬಾಯೆಲ್ಲಾ ಒಣಗುತ್ತಾ ಬರುತ್ತೆ. ಒಳ್ಳೊಳ್ಳೇ ತಿಂಡಿಗಳನ್ನೇ ತಿನ್ನಬೇಕೆಂತ ಆಸೆ.

ಬ್ರಹ್ಮ—ನನಗೂ ಆಶೆಯಾಗಿದೆ.

ಸದಾ—ಹಾಗಾದರೆ ನಡೆ. ಎಲ್ಲಾದರೂ ಆಗಲಿ, ಕೊಡಿಸು ನಡೆ.

## ವನ.

ವೇದಮಾತೆಯು ಕುಳಿತಿರುವಳು.

(ವಿಶ್ವಾಮಿತ್ರನ ಪ್ರವೇಶ.)

ವಿಶ್ವಾ—ಈ ರಮಣಿಯು ಯಾರು? ಈ ಹೆಗ್ಗಾಡಿನಲ್ಲಿ ಒಬ್ಬಂಟಿಗಳಾಗಿ ಕುಳಿತಿರುವಳು! ಅಪೂರ್ವವಾದ ತೇಜಸ್ವಿನಿಯಾಗಿರುವಳು-ಓಹೋ! ಏನನ್ನೋ ಧ್ಯಾನ ಮಾಡುತ್ತಿರುವಂತೆ ತೋರುವುದು. (ಸಮೀಪಕ್ಕೆ ಹೋಗಿ) ತಾಯಿ! ನೀನು ಯಾರು?

ವೇದ—ಮಗು! ನಾನು ಯಾರು ಗೊತ್ತಿಲ್ಲವೆ? ನಾನು ನಿನ್ನ ಹಿತೈಷಿಣಿ. ನೀನು ಗರ್ಭದಲ್ಲಿದ್ದಾಗಿನಿಂದ ನಿನ್ನ ಶ್ರೇಯಃ ಪ್ರಾರ್ಥನೆಯನ್ನು ಮಾಡುತ್ತಿರುವೆನು.

ವಿಶ್ವಾ—ನಿಶ್ಚಯವಾಗಿಯೂ ಇವಳು ಪುತ್ರಶೋಕಾತುರಳಾದ ಹುಚ್ಚಿಯಾಗಿರಬೇಕು. ನಾನು ಅವಳ ಮಗನೆಂದು ತಿಳಿದುಕೊಂಡು ನನ್ನನ್ನು ಪ್ರೀತಿಯಿಂದ ಮಾತನಾಡಿಸುವಳೆಂದು ತೋರುವುದು.

ವೇದ—ಮಗು! ನೀನು ತಿಳಿದುಕೊಳ್ಳಲಾರೆ. ನಿನಗೆ ಒಳ್ಳೆಯದಾಗಲೆಂದೇ ನಾನು ಈಗ ಇಲ್ಲಿ ಕುಳಿತಿದ್ದೇನೆ. ನೀನು ಒಬ್ಬಂಟಿಗ. ನಿನಗೆ ಈ ಹೆಗ್ಗಾಡಿನಲ್ಲಿ ವಾಸಮಾಡಲು ಸಂಕೋಚವಾಗಬಹುದೆಂದೇ ನಾನೂ ಇಲ್ಲಿಯೇ ವಾಸಮಾಡುತ್ತಿರುವೆನು. ಮಗು! ನಾನಲ್ಲದೆ ಮತ್ತಾರು ನಿನ್ನ ಮನಸ್ಸಿನ ಕೋರಿಕೆಯನ್ನು ಪೂರೈಸಬಲ್ಲರು?

ವಿಶ್ವಾ—ತಾಯಿ! ನನ್ನ ಮನಸ್ಸಿನ ಕೋರಿಕೆಯು ಪೂರೈಸುವುದು ? ನನ್ನ ಮನಸ್ಸಿನ ಕೋರಿಕೆಯನ್ನು ನೀನು ಬಲ್ಲೆಯಾ ? ನಾನು ಬ್ರಾಹ್ಮಣನಾಗಬೇಕೆಂದು ಆಸೆಪಡುತ್ತಿದ್ದೇನೆ.

ವೇದ—ನೀನು ಬ್ರಾಹ್ಮಣನಾಗಬೇಕೇನು? ನೀನು ಬ್ರಾಹ್ಮಣನೇ. ಅಜ್ಞಾನದಿಂದ ನಿನ್ನ ಕಣ್ಣು ಚೆನ್ನಾಗಿ ಕಾಣಿಸುವುದಿಲ್ಲ. ಅದರಿಂದಲೇ ನನ್ನನ್ನು ಗುರ್ತಿಸಲಾರೆ. ನನ್ನನ್ನು ಗುರ್ತು ಹಿಡಿದಾಗ ನಿನಗೆ ನೀನು ಬ್ರಾಹ್ಮಣನೆಂಬುವುದು ಗೊತ್ತಾಗುವುದು.

ವಿಶ್ವಾ—ಹೇಗೆ ಗುರ್ತು ಹಿಡಿಯಬೇಕು ?

ವೇದ—ತಪಸ್ಸಿನಿಂದ ಚಿತ್ತ ಶುದ್ಧಿಮಾಡಿಕೋ. ಆಗ ನೀನು ಗುರ್ತು ಹಿಡಿಯಲಾಗುವುದು. (ವೇದಮಾತೆಯು ಹೊರಟು ಹೋಗುವಳು.)

ವಿಶ್ವಾ—ನಾನು ಕ್ಷತ್ರಿಯ ಕುಮಾರ. ತಪಸ್ಸೆಂದು ಕೇಳಿದ್ದೇನೆ. ಹೇಗೆ ತಪಸ್ಸು ಮಾಡಬೇಕೋ ತಿಳಿಯದು. ನನಗೆ ಉಪದೇಶ ಮಾಡತಕ್ಕವರೂ ಇಲ್ಲ. ತಾಯಿ! ಬಾ ! ನೀನೇ ನನಗೆ ಉಪದೇಶಮಾಡಿ ದಾರಿತೋರಿಸು.

(ವೇದಮಾತೆಯು ಪುನಃ ಪ್ರವೇಶ)

ವೇದ—ವತ್ಸ ! ಕೇಳು. ಮನುಷ್ಯನ ಮನಸ್ಸು ಬಹಳ ಚಂಚಲವಾದದ್ದು. ಅದನ್ನು ಜಯಿಸುವುದಕ್ಕೆ ಸದಾ

ಚಾರಗಳ ಅನುಷ್ಠಾನವೇ ದಾರಿ. ಅದರ ಪ್ರಯೋಜನವೇ ತಪಸ್ಸು. ಇಂದ್ರಿಯ ಭೋಗಗಳನ್ನು ಬಿಡುವುದೇ ತಪಸ್ಸಿಗೆ ಮೊದಲನೆಯ ಸೋಪಾನ (ಮೆಟ್ಟಲು). ಚಿತ್ತವಿಕಾರವೇ ತಪಸ್ಸಿಗೆ ವಿಘ್ನ. ಇಂದ್ರಿಯಾದಿಗಳನ್ನು ಜಯಿಸದಿದ್ದರೆ ಸುಖದುಃಖಗಳಿಂದ ಮನೋವಿಕಾರವುಂಟಾಗುವುದು. ಆದ್ದರಿಂದಲೇ ಸ್ವಲ್ಪವೂ ವಿಕಾರವಾಗದಂತೆ ಸುಖದುಃಖಗಳನ್ನೂ ಶೀತತಾಪಗಳನ್ನೂ ಸಹಿಸಿಕೊಳ್ಳಬೇಕು. ಮರದಂತೆ ವಾಯ್ವಾಹಾರಿಯಾಗಿ ತಪಸ್ವಿಯು ಜಯಿಸಬೇಕು.

ವಿಶ್ವಾ—ತಾಯಿ ಈ ದೇಹವು ಪಾಂಚಭೌತಿಕವಾದದ್ದು. ಬಾಲ್ಯದಿಂದಲೂ ಅತ್ಯಂತ ಸುಖದಲ್ಲಿ ಬೆಳೆದದ್ದು. ಈ ಘೋರವಾದ ತಪೋವ್ರತವನ್ನು ಈ ದೇಹವು ಸಹಿಸ ಬಲ್ಲುದೇ? ದೇಹವು ಉಳಿಯುವುದೆ? ಎಂತಹ ತಪೋಮಾರ್ಗವನ್ನು ಅನುಸರಿಸಬೇಕೋ ತಿಳಿಯುದಲ್ಲಾ ?

ವೇದ—ಮನಸ್ಸಿನ ಪ್ರಕೃತಿಯು ನಿನಗೆ ತಿಳಿಯದು. ಅದರಿಂದಲೇ ನಿನಗಿಷ್ಟು ಭಯ. "ನಾನು ಅತಿ ಕ್ಷೀಣನಾಗಿಧೇನೆ. ಸುಖ ದುಃಖ ಇವುಗಳಿಗೆ ಅಧೀನ" ಎಂದು ಭ್ರಮೆ ಪಡುತ್ತೀಯೆ. ನಿನಗೆ ತಿಳಿವಳಿಕೆಯು ಹೆಚ್ಚಿದರೆ "ನಾನು ಬಹಳ ಶಕ್ತಿವಂತ" ನೆಂದು ತಿಳಿಯುವೆ. ಆ ಶಕ್ತಿಯ ಪ್ರಭಾವದಿಂದ ಅಸಾಧ್ಯವಾದುದೆಲ್ಲವೂ ಸಾಧ್ಯವಾಗುವುವು. ಮನಸ್ಸಿನ ಪ್ರಭಾವದಿಂದಲೇ ದೇಹವು ಮರದಂತಾಗುವುದು.

ಶೀತ ತಾಪಗಳಿಗೆ ಹೆದರದೆ ಆತ್ಮಜ್ಞಾನದಲ್ಲಿಯೇ ಯಾವಾಗಲೂ ನಿಲ್ಲುವುದು. ತಪಸ್ಸಿನಲ್ಲಿ ಯಾವಾಗಲೂ ಮಗ್ನನಾಗಿರು. ಇಷ್ಟಾರ್ಥವು ಈಡೇರುವುದು. ತಪಸ್ಸು- ತಪಸ್ಸು- ತಪಸ್ಸು- ನಿನ್ನಿಷ್ಟಾರ್ಥಲಾಭಕ್ಕೆ ಬೇರೆ ದಾರಿಯೇ ಇಲ್ಲ. (ವೇದಮಾತೆಯು ಹೋಗುವಳು)

ವಿಶ್ವಾ—ಎಲೈ! ಪಂಚಭೂತಾತ್ಮಕವಾದ ದೇಹವೇ! ಇನ್ನು ನಾನು ನಿನ್ನ ಅಧೀನನಲ್ಲ. ನೀನೇ ನನ್ನ ದಾಸ. ಎಂದೆಂದಿಗೂ ನಾನು ನಿನ್ನ ದಾಸನಾಗುವುದಿಲ್ಲ. ನನ್ನ ಆಜ್ಞಾಧಾರಕನಾಗು. ಇಂದ್ರಿಯಗಳನ್ನು ಜಯಿಸು. ತಪಸ್ಸಿಗೆ ವಿಘ್ನವಾಗದಂತೆ ನೋಡಿಕೊ. ವಾಯು ಭಕ್ಷಣದಿಂದ ಜೀವಿಸು. ತಪಸ್ಸು- ಮಹಾ ತಪಸ್ಸಿನಲ್ಲಿ ನಿಮಗ್ನನಾಗುವೆನು.

(ವಿಶ್ವಾಮಿತ್ರನು ಹೋಗುವನು.)

---

## ಎರಡನೆಯ ಅಂಕ.

—o—

### ವನ.

ವಿಶ್ವಾಮಿತ್ರನ ಪ್ರವೇಶ.

ವಿಶ್ವಾ—ಪಂಚಾಗ್ನಿ ಮಧ್ಯದಲ್ಲಿ ಕುಳಿತು ಊರ್ಧ್ವಪರನಾಗಿ ಒಂದು ಸಾವಿರ ವರುಷ ಘೋರ ತಪಸ್ಸನ್ನು ಮಾಡಿದೆನು. ನಿರಂತರವೂ ತುಷಾರಾವೃತವಾದ

ಹಿಮಾಲಯ ಪರ್ವತದ ಶಿಖರದಲ್ಲಿ ಯಾವ ಆವರಣವೂ ಹೊದಿಕೆಯೂಯಿಲ್ಲದೆ ಬಹುದಿನ ಧ್ಯಾನದಲ್ಲಿಯೇ ಮಗ್ನನಾಗಿದ್ದೆನು. ಮಂಜೆಲ್ಲಾ ಕರಗಿ ನೀರಾಗಿ ಹುಚ್ಚು ಹೊಳೆಯಂತೆ ಹರಿದಾಗಲೂ ಧ್ಯಾನವನ್ನು ಬಿಡಲಿಲ್ಲ. ಆದರೇನು ? ಎಲ್ಲವೂ ನಿಷ್ಫಲವಾಯಿತು. ಬ್ರಹ್ಮರ್ಷಿಯಾಗಲಿಲ್ಲ. ಕೇವಲ ರಾಜರ್ಷಿತ್ವವು ಮಾತ್ರ ಬಂದಿತು. ವಸಿಷ್ಠನು ಬ್ರಹ್ಮರ್ಷಿ-ನಾನು ಬರಿಯ ರಾಜರ್ಷಿ. ಧಿಕ್ ! ಧಿಕ್ ! ಸಾಕು. ಈ ಕ್ಷತ್ರಿಯ ಜನ್ಮಕ್ಕೆ—ಧಿಕ್! ಎಂತಹ ಕ್ಷತ್ರಿಯ ಜನ್ಮ! ಏಳೇಳು ಜನ್ಮಕ್ಕೂ ಕ್ಷತ್ರಿಯ ಜನ್ಮವು ಯಾರಿಗೂ ಬೇಡ.

ವೇದಮಾತೆಯ ಪ್ರವೇಶ

ವೇದ—ಯಾಕಪ್ಪಾ ! ಇಷ್ಟು ಆತ್ಮಧಿಕ್ಕಾರ ಮಾಡಿಕೊಳ್ಳುತ್ತೀಯೆ ?

ವಿಶ್ವಾ—ತಾಯಿ ! ನೀನು ಹೇಳಲಿಲ್ಲವೆ ? ಘೋರವಾದ ತಪಸ್ಸನ್ನು ಮಾಡಿದೆನು. ಫಲವೇನು ? ಈ ದಿನ ಬ್ರಹ್ಮನು ಬಂದು ನನ್ನನ್ನು ಬರಿಯ "ರಾಜರ್ಷಿ" ಎಂದು ಕರೆದು ಹೋದದ್ದೇ ಫಲ. ವಸಿಷ್ಠನು ಬ್ರಹ್ಮರ್ಷಿ. ನಾನು ಅವನಿಗೆ ಸಮನಾಗದಿದ್ದರೆ ನನ್ನ ಜನ್ಮವು ವ್ಯರ್ಥ, ಬದುಕಿ ಪ್ರಯೋಜನವಿಲ್ಲ. ಈಗ ಪ್ರಾಣತ್ಯಾಗ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿದ್ದೇನೆ. ಮುಂದಿನ ಜನ್ಮದಲ್ಲಿ ಬ್ರಹ್ಮರ್ಷಿಯಾಗುವೆನು.

ವೇದ—ವತ್ಸ! ರಾಜರ್ಷಿ ಎಂದರೇನೆಂಬುದನ್ನು ಬಲ್ಲಿ ಯಾ? ನಿನ್ನ ಪ್ರಭಾವವೆಂಥದೆಂದು ತಿಳಿದಿರು ವೆಯಾ? ಬ್ರಹ್ಮವರದಿಂದ ರಾಜರ್ಷಿತ್ವವನ್ನು ಹೊಂದಿ ಮಹಾಶಕ್ತಿಯನ್ನು ಹೊಂದಿರುವೆ. ಕೂಡಲೆ ನಿನ್ನ ಪ್ರಭಾವವು ಹೊರಪಡುವುದು. ಇಂದ್ರನೇ ನಿನ್ನ ಪ್ರಭಾವದಿಂದ ಹಿಂಸೆಪಡಬೇಕಾಗುವುದು. ಮೂರು ಲೋಕಗಳೂ ತಲ್ಲಣಿಸಿ ಹೋಗುವುವು. ಬ್ರಹ್ಮನೇ ನಿನ್ನಿಂದ ವರವನ್ನು ಬೇಡುವ ಕಾಲವು ಒದಗುವುದು. ನಿನ್ನ ಈಗಿನ ರಾಜರ್ಷಿತ್ವವು ಮುಂದೆ ನೀನುಬ್ರಹ್ಮ ರ್ಷಿತ್ವವನ್ನು ಪಡೆಯುವುದಕ್ಕೆ ಮೊದಲನೆಯ ಸೋ ಪಾನವಾಗಿರುವುದು. ರಾಜರ್ಷಿತ್ವವು ಸಾಮಾನ್ಯವಾ ದುದಲ್ಲ.

ವಿಶ್ವಾ—ತಾಯಿ! ನೀನು ಯಾರು? ನಿನ್ನ ಪ್ರೇಮ— ಸಮಾಧಾನ ವಚನಗಳಿಂದ ನನ್ನ ಹೃದಯವು ಉತ್ಸಾ ಹಗೊಳ್ಳುತ್ತಿರುವುದು.

ವೇದ—ವತ್ಸ! ಎಂದು ನೀನು ಬ್ರಹ್ಮರ್ಷಿಯಾಗು ವೆಯೋ ಅಂದೇ ನನ್ನ ಪರಿಚಯವು ನಿನಗೆ ಚೆನ್ನಾಗಿ ಆಗುವುದು. ನೀನು ನನ್ನ ಸಂತಾನ. ನಿನ್ನ ಉನ್ನತಿ ಯೇ ನನ್ನ ಉನ್ನತಿ. ಎಂದು ನೀನು ಬ್ರಹ್ಮರ್ಷಿತ್ವದ ಉನ್ನತಿಯನ್ನು ಪಡೆಯುವೆಯೋ ಅಂದು ನೀನು ನನ್ನ ಪರಿಚಯವನ್ನು ಕೇಳುವುದಿಲ್ಲ. ನಾನು ಯಾ ರೆಂಬುದನ್ನು ನಿನ್ನಷ್ಟಕ್ಕೆ ನೀನೇ ತಿಳಿದುಕೊಳ್ಳುವೆ. ವತ್ಸ! ಚಂಚಲನಾಗಬೇಡ. ನಿನ್ನ ತಾಯಿಯು

ನಿನ್ನನ್ನು ಹೊತ್ತು ಹೆತ್ತದ್ದು ಮಾತ್ರವೇ. ನಾನು ಹಗಲೂ ರಾತ್ರಿ ನಿನ್ನ ಸಂರಕ್ಷಣೆಯಲ್ಲಿಯೇ ನಿಯುಕ್ತಳಾಗಿರುವೆನು.

ವಿಶ್ವಾ—ತಾಯಿ! ತಾಯಿ! ನೀನು ಯಾರು! ಹೇಳು. ನನಗೆ ಹೇಳು.

ವೇದ—ನನ್ನ ಪರಿಚಯವು ನಿನಗೆ ಅನುಭವದಿಂದಲೇ ಗೊತ್ತಾಗಬೇಕು. ಹೇಳಿದರೆ ತಿಳಿಯುವುದಿಲ್ಲ.

(ವೇದಮಾತೆಯು ಹೋಗುವಳು)

ವಿಶ್ವಾ—ನಿಶ್ಚಯವಾಗಿಯೂ ಹುಚ್ಚಿ. ನನ್ನಂತಿದ್ದ ಯಾವನೋ ಒಬ್ಬ ಬಾಲಕನನ್ನು ಸಾಕುತ್ತಿದ್ದಳು. ಅವನು ಹೋಗಿರಬಹುದು. ಅಂದಿನಿಂದ ನನ್ನನ್ನೇ ಆ ಮಗನೆಂದು ತಿಳಿದುಕೊಂಡಿದ್ದಾಳೆ. ಹೇಗಾದರೂ ಆಗಲಿ. ಪುನಃ ತಪಸ್ಸಿಗೆ ಆರಂಭ ಮಾಡುವೆನು. ಬ್ರಹ್ಮರ್ಷಿತ್ವ ಲಾಭವಾಗಬೇಕು. ಇಲ್ಲದಿದ್ದರೆ ನನ್ನ ಪ್ರಾಣವು ಹೋಗಬೇಕು—ಎರಡರಲ್ಲೊಂದು. ಇದೇ ನನ್ನ ದೃಢಸಂಕಲ್ಪ.

(ವಿಶ್ವಾಮಿತ್ರನು ಹೋಗುವನು)

**ಅರಮನೆ ಅಂತಃಪುರ.**

ಮಹಾರಾಜ ತ್ರಿಶಂಕು; ಮಹಾರಾಣೀ ಬನರಿ.

ತ್ರಿಶಂಕು—ಈ ಬಾರಿ ಯೋಚನೆಯನ್ನು ಮಾಡಿದ್ದೇನೆ.

ಬದ—ಬೇಡ. ಬೇಡ. ನಿನ್ನ ಯೋಚನೆಗಳಿಂದ ಯಾವ

ಪ್ರಯೋಜನವೂ ಇಲ್ಲ. ನೀನು ಒಂದು ಒಂದು ಯೋಚನೆ ಮಾಡಿದರೆ ನನ್ನ ಪ್ರಾಣವೇ ಹೋಗುವ ಹಾಗಾಗುತ್ತೆ. ಏನು ಭಾರಿ ಯೋಚನೆ? ಒಂದು ವರ್ಷ ಕಾಲ ಜಲವಿಹಾರ ಮಾಡಬೇಕೆಂದೇ? ಎಲ್ಲೆಲ್ಲಿಯೂ ನೀರಿನಲ್ಲಿಯೇ ಸಂಚಾರ ಮಾಡುತ್ತಿರಬೇಕೆಂದೇ? ವನ ಸಂಚಾರವೇ? ಮನುಷ್ಯರ ಮುಖವನ್ನೇ ನೋಡದೇ ಇರಬೇಕು—ಮರವನ್ನ ನೋಡು—ಲತೆಯನ್ನು ನೋಡು—ಪಕ್ಷಿಗಳನ್ನು ನೋಡು. ಜಟಧಾರಿಯಾದ ಸನ್ಯಾಸಿಯನ್ನು ನೋಡು - - -ಮತ್ತೆ

ತ್ರಿಶಂಕು—ಅಲ್ಲ. ಅಲ್ಲ. ಈ ಬಾರಿ ಅದು ಯಾವುದೂ ಅಲ್ಲ. ಈ ಸಾರಿ ಒಂದು ಮಹಾಯಜ್ಞ.

ಬದ—ಸರಿಸರಿ. ನಿನಗೆ ಯಜ್ಞವನ್ನು ಮಾಡಲು ಬೇಸರವಾಗುವುದಿಲ್ಲವೇ? ಇದೂ ಸೇರಿ ಸಾವಿರ ಯಜ್ಞಗಳನ್ನು ಮಾಡಿರುವೆ. ನನಗಂತೂ ಬೇಸರ. ಒಂದೇ ಬಟ್ಟೆಯಲ್ಲಿ ದಿನವೆಲ್ಲಾ ಉಪವಾಸವಿದ್ದು ಹೋಮದಿಂದ ಕಣ್ಣನ್ನು ಹಾಳು ಮಾಡಿಕೊಳ್ಳಬೇಕಲ್ಲವೇ?

ತ್ರಿಶಂಕು—ಈ ಸಾರಿ ಬಹಳ ಸೊಗಸಾದ ಯಜ್ಞ. ಈ ಯಜ್ಞದೊಡನೆ ಯಜ್ಞ ಮಾಡುವುದನ್ನು ಸಾಕು ಮಾಡುವೆನು.

ಬದ—ಈ ಸಾರಿ ಯಾವ ಯಜ್ಞವನ್ನು ಮಾಡುವೇ? ಹೇಳು?

ತ್ರಿಶಂಕು—ನಾನು ಸಶರೀರನಾಗಿ ಸ್ವರ್ಗಕ್ಕೆ ಹೋಗುವೆನು.

ಬದ—ಬೇಡ ಇಂತಹ ಸರ್ವನಾಶದ ಯಜ್ಞವನ್ನು ಮಾಡಬೇಡ.

ತ್ರಿಶಂಕು—ನಾನೇನು ಒಬ್ಬನೇ ಹೋಗುವೆನೇ? ನಿನ್ನನ್ನೂ ಕರೆದುಕೊಂಡು ಹೋಗುವೆನು.

ಬದ—ಇದೇನು ಮಾತು! ಎಂತಹ ಸರ್ವನಾಶದ ಕೆಲಸ.

ತ್ರಿಶಂಕು—ಸ್ವರ್ಗಕ್ಕೆ ಹೋಗುವುದು ಸರ್ವನಾಶದ ಕೆಲಸವೇ?

ಬದ—ಮೃತನಾದ ಮೇಲೆ ಹೇಗಿದ್ದರೂ ಸ್ವರ್ಗಕ್ಕೆ ಹೋಗಿಯೇ ಹೋಗುವೆ. ಈಗ ಈ ಯಜ್ಞದ ಕೆಲಸವೇತಕ್ಕೆ?

ತ್ರಿಶಂಕು—ಮೃತನಾದ ಮೇಲೆ ಸುಖ ಸಂತೋಷವೆಲ್ಲಿಯದು? ಈ ದೇಹದೊಡನೆ ಸ್ವರ್ಗಕ್ಕೆ ಹೋದರೆ ನಿನ್ನ ಕೈಯನ್ನು ಹಿಡಿದುಕೊಂಡು ಅಲ್ಲಲ್ಲಿ ಸುತ್ತುತ್ತಿರಬಹುದು. ಅಲ್ಲಲ್ಲಿ ಅಪ್ಸರ ಸ್ತ್ರೀಯರು ನರ್ತನ ಮಾಡುವರು. ನಾವಿಬ್ಬರೂ ನಿಂತು ನೋಡಬಹುದು. ಶಚಿಯು ದೇವೇಂದ್ರನೊಡನೆ ಅಮೃತಪಾನ ಮಾಡುವ ಸಮಯದಲ್ಲಿ ನಾವಿಬ್ಬರೂ ಒಂದೆರಡು ಬಾರಿ ಪಾನ ಮಾಡಬಹುದು. ನಂದನ ಕಾನನದಲ್ಲಿ ಅಲ್ಲಿ ಸುತ್ತುವಾಗ ವಿವಿಧ ಪುಷ್ಪಗಳನ್ನು ಕುಯಿದು ಪುಷ್ಪಮಾಲಿಕೆಗಳನ್ನು ಮಾಡಬಹುದು. ಒಂದು ಪಾರಿಜಾತ

ಕುಸುಮವನ್ನು ತೆಗೆದು ನಿನ್ನ ಕೇಶರಾಶಿಗೆ ಅಲಂಕಾರ ಮಾಡುವೆನು.

ಬದ—ಈಗ ಅದಕ್ಕೆ ಅವಸರವಿಲ್ಲ. ಮೃತನಾಗಿ ಸ್ವರ್ಗಕ್ಕೆ ಹೋದಾಗ ಪಾರಿಜಾತ ಕುಸುಮವನ್ನು ಮುಡಿಸು.

ತ್ರಿಶಂಕು—ನಿನಗೆ ಗೊತ್ತಿಲ್ಲ. ಆ ಸಂತೋಷವು ನಿನಗೆ ತಿಳಿಯದು. ಅಂತಹ ಚಂದ್ರನನ್ನು ನೀನು ನೋಡಿಯೇ ಇಲ್ಲ. ಯಾವಾಗಲೂ ಅಮೃತವನ್ನೇ ಸುರಿಸುವ ಚಂದ್ರನನ್ನು ನೀನು ನೋಡಿಲ್ಲ.

ಬದ—ಸೂರ್ಯನಿಲ್ಲವೇನು ?

ತ್ರಿಶಂಕು—ಸೂರ್ಯನೂ ಇದ್ದಾನೆ. ಅವನ ಪ್ರಕಾಶವಾದರೊ ಸೊಗಸು. ಅದನ್ನು ನೋಡುವುದೇ ಒಂದು ತಮಾಷೆ.

ಬದ—ನೋಡೋಣ, ಅಲ್ಲಿ ಸೆಕೆ ಚಳಿಗಳಿಲ್ಲವೇನು ?

ತ್ರಿಶಂಕು—ನಿನಗೆ ಸ್ವಲ್ಪವೂ ಬುದ್ಧಿ ಇಲ್ಲ. ನಾನು ಹೇಳುವುದು ಹೇಗೆತಾನೇ ತಿಳಿದೀತು ? ಸ್ವರ್ಗದ ಸೂರ್ಯನು ಬಹಳ ತಂಪು ಕೊಡುವನು.

ಬದ—ನಾನು ಸ್ವರ್ಗಕ್ಕೆ ಹೋಗಲಾರೆ. ಮನುಷ್ಯರ ಮುಖವನ್ನು ನೋಡದಿದ್ದರೆ ಉಸಿರು ಸಿಕ್ಕಿಕೊಂಡು ಪ್ರಾಣವೇ ಹೋಗಿಬಿಡುವುದು. ವಿಕಟ ವಿಕಟವಾದ ಮುಖಗಳು. ಅವುಗಳೆಲ್ಲಾ ಪೂಜೆ ಮಾಡುವುದಕ್ಕೇ ಸರಿ. ಬಗೆಬಗೆಯ ಧ್ವನಿ. ಕೆಲವರಿಗೆ ನಾಲ್ಕು ಮುಖ,

ಕೆಲವರಿಗೆ ಐದು ಮುಖ, ಕೆಲವರಿಗೆ ದೊಡ್ಡ ದೊಡ್ಡ ಕಣ್ಣುಗಳು. ಬುಸ್ಸಾಬುಸ್ಸನೆ ಉಸಿರು ಬಿಡುತ್ತಾರೆ. ಏನಾದರೂ ಆಗಲಿ, ಈಗ ಸ್ವರ್ಗಕ್ಕೆ ಹೋಗಬೇಕಾಗಿಲ್ಲ. ಮರಣಾನಂತರ ಕಣ್ಣು ಕಿವಿ ಮುಚ್ಚಿಕೊಂಡು ಸ್ವರ್ಗದಲ್ಲಿ ಇರಬೇಕಾಗುತ್ತೆ. ಈಗ ಅದು ಯಾವುದೂ ಬೇಡ.

ತ್ರಿಶಂಕು—ನೀನು ಬರುವದಿಲ್ಲವಷ್ಟೆ? ನಾನು ಹೋಗಿಯೇ ಹೋಗುವೆನು. ವಸಿಷ್ಠರನ್ನು ಕರೆದುಕೊಂಡು ಬರುವಂತೆ ಹೇಳಿ ಕಳುಹಿಸಿದ್ದೇನೆ. ಏನೇನು ಬೇಕೋ ಅದನ್ನೆಲ್ಲಾ ಸಿದ್ಧಪಡಿಸುವಂತೆ ಹೇಳಿರುವೆನು.

ಬದ—ಬೇಡ. ಆ ಯಜ್ಞವನ್ನು ಮಾಡಲಾರೆ. ಬಹಳ ಕಷ್ಟ. ಬೇಡ. ಈಗ ಬೇಡ.

ತ್ರಿಶಂಕು—ನಾನು ನಿಶ್ಚಯಿಸಿಕೊಂಡ ಮೇಲೆ ಅದನ್ನು ಮಾಡಿಯೇ ಮಾಡುವೆನು. ನನ್ನ ಮಾತು ಎಂದಿಗೂ ಸುಳ್ಳಾಗುವುದಿಲ್ಲ. ನಿನ್ನನ್ನು ತಮಾಷೆ ಮಾಡುವುದಕ್ಕೋಸ್ಕರ ನಾನು ಎಂದಾದರೂ ಸುಳ್ಳಾಡಿರುವೆನೆ? ನನ್ನಲ್ಲಿ ಮಾತು ಹೇಗೋ— ನಡವಳಿಕೆಯೂ ಹಾಗೆಯೇ.

ಬದ—ಹಾಗಾದರೆ ನಿನ್ನ ಕೆಲಸವನ್ನು ನೀನು ಮಾಡಿಕೊ. ನಾನು ಯಜ್ಞಕ್ಕೆ ಬರುವುದಿಲ್ಲ. ಸಶರೀರನಾಗಿ ಸ್ವರ್ಗಕ್ಕೆ ಹೋಗಬೇಡ. ಈ ಅತುಳೈಶ್ವರ್ಯವನ್ನೆಲ್ಲಾ ಬಿಟ್ಟು ಇದ್ದಕ್ಕಿದ್ದಹಾಗೆಯೇ ಹೋಗುವುದು

ಹೇಗೆ? ಮನುಷ್ಯರಂತೆ ಮಾತನಾಡಿದರೆ ಸರಿ. ನನಗೆ ಆ ಸ್ವರ್ಗಾದಿಗಳು ಬೇಡ.

ತ್ರಿಶಂಕು—ನೀನು ಬರದಿದ್ದರೆ ನಾನೊಬ್ಬನೇ ಯಜ್ಞವನ್ನು ಮಾಡುವೆನು.

ಬದ—ಬೇಡ. ಕೇಳು. ನಾನು ಹೇಳುವ ಮಾತನ್ನು ಕೇಳು. ಶರೀರದೊಡನೆ ಸ್ವರ್ಗಕ್ಕೆ ಹೋಗುವುದಕ್ಕೆ ಬಹಳ ತೊಂದರೆಗಳುಂಟೆಂದು ಕೇಳಿದ್ದೇನೆ. ಎಷ್ಟೋ ವರುಷಗಳು ತಲೆಕೆಳಗಾಗಿ ನಿಂತಿರಬೇಕು. ಎಷ್ಟೋ ವರುಷಗಳು ಮರದ ತುಂಡಿನಂತೆ ಬಿದ್ದಿರಬೇಕು. ಎಷ್ಟೋ ವರುಷಗಳು ನಾಲ್ಕು ದಿಕ್ಕುಗಳಲ್ಲಿಯೂ ಆ ಜ್ವಲಿಸುತ್ತಿರುವ ಅಗ್ನಿ ಮಧ್ಯದಲ್ಲಿ ಕುಳಿತಿರಬೇಕು. ಎಷ್ಟೋ ವರುಷಗಳು ಕತ್ತಿನವರೆಗೂ ನೀರಿನಲ್ಲಿ ನಿಂತಿರಬೇಕು. ಎಷ್ಟೋ ವರ್ಷಗಳು ನಿರಾಹಾರಿಯಾಗಿರಬೇಕು. ಇಂತಹ ಕಷ್ಟದ ಕೆಲಸವೇಕೆ? ಇವನ್ನೆಲ್ಲಾ ಮಾಡುವುದಕ್ಕೆ ಹೋದರೆ ಎಷ್ಟೋ ಹಿಂಸೆಯಾಗಿ ಹೋಗುವುದು.

ತ್ರಿಶಂಕು—ನಾನು ಹಟ ಹಿಡಿದ ಮೇಲೆ ಬಿಡುವುದಿಲ್ಲ.

ಬದ—ಇಷ್ಟು ಹಟ ಹಿಡಿಯಬಾರದು. ಶರೀರದೊಡನೆ ಸ್ವರ್ಗಕ್ಕೆ ಹೋಗಬೇಡ. ನೀನೆಂದಿಗೂ ಹೋಗಲಾಗುವುದಿಲ್ಲ. ಅದು ನಿನ್ನಿಂದಾಗುವ ಕೆಲಸವಲ್ಲ. ಶೂನ್ಯದೇಶದಲ್ಲಿ ಹತ್ತಿ ಸ್ವರ್ಗಕ್ಕೆ ಹೋಗಬೇಕು.

ತ್ರಿಶಂಕು—ಏನು ? ಹೋಗುವುದಕ್ಕಾಗುವುದಿಲ್ಲವೋ ? ನೋಡೋಣ. ವಸಿಷ್ಠರು ಬರಲು ನಿಧಾನವಾಗ

ಬಹುದು. ನಾನೇ ಹೋಗುವೆನು. (ತ್ರಿಶಂಕುವು ಹೋಗುವನು.)

ಬದ—ನಾನೂ ಹಿಂಬಾಲಿಸುವೆನು. (ಬದರಿಯು ಹೋಗುವಳು.)

**ವಸಿಷ್ಠರ ಆಶ್ರಮದ ಮುಂಭಾಗ.**

ಶಕ್ತಿಯು ನಿಂತಿರುವನು.

ತ್ರಿಶಂಕುವಿನ ಪ್ರವೇಶ.

ಶಕ್ತಿ—ಮಹಾರಾಜನಿಗೆ ಸುಖಾಗಮನವೇ ?

ತ್ರಿಶಂಕು—ನಮಸ್ಕರಿಸುವೆನು. ನೋಡು. ನಿಮ್ಮ ತಂದೆಯ ಬುದ್ಧಿಯನ್ನು ನೋಡು. ನಾನು ಅವರ ಯಜಮಾನ. ನನ್ನ ಕೆಲಸವನ್ನು ಮಾಡಲೊಪ್ಪಲಿಲ್ಲ.

ಶಕ್ತಿ—ತಾವು ಕೋಪಿಸಕೂಡದು. ಈಗ ಅವರು ಯಾವುದೋ ದೇವಕಾರ್ಯದಲ್ಲಿ ನಿರತರಾಗಿರುವರು. ಸಮಯಾಂತರದಲ್ಲಿ ತಾವು ಬಂದು ತಮ್ಮ ಪ್ರಾರ್ಥನೆಯನ್ನು ತಿಳಿಸಬಹುದು.

ತ್ರಿಶಂಕು—ಇಲ್ಲ. ಇಲ್ಲ. ಖಂಡಿತವಾಗಿಯೂ ಮಾಡಲಾಗುವುದಿಲ್ಲವೆಂದು ಒಂದೇ ಮಾತಾಗಿ ಹೇಳಿರುವರು. ಮುದುಕನಾದ್ದರಿಂದ ಮಂತ್ರ ತಂತ್ರಗಳೆಲ್ಲಾ ಮರೆತು ಹೋಗಿರಬಹುದು.

ಶಕ್ತಿ—ಮಹಾರಾಜ! ನಮ್ಮ ತಂದೆಯ ವಿಷಯವಾಗಿ ಇಂತಹ ಮಾತುಗಳನ್ನಾಡಬೇಡ. ಇದರಿಂದ ನಿನಗೆ ಮಂಗಳವಾಗದು.

ತ್ರಿಶಂಕು—ನಿಜವಾಗಿಯೂ ಯೋಚಿಸು. ಇದರಿಂದ ನನಗೆ ಮಂಗಳವೇನು? ಅಮಂಗಳವೇನು? ನಾನು ಸಾವಿರಾರು ಯಜ್ಞಗಳನ್ನು ಮಾಡಿ ಮುಗಿಸಿರುವುದು ನಿನಗೆ ಗೊತ್ತಿಲ್ಲವೊ? ನೀನು ಹುಡುಗನಾಗಿದ್ದಂದಿನಿಂದ ಅರಮನೆಗೆ ತಿಂಡಿ ತಿನ್ನುವುದಕ್ಕೆ ಬರುತ್ತಿದ್ದೆಯಲ್ಲಾ—ಜ್ಞಾಪಕವಿಲ್ಲವೆ?

ಶಕ್ತಿ—ಆಮೇಲೆ—? ಹೇಳು!

ತ್ರಿಶಂಕು—ನಾನು ಮಹಾ ಪುಣ್ಯವಂತ. ಅದು ನಿಮ್ಮ ತಂದೆಗೂ ಗೊತ್ತು. ಈಗ ಸಶರೀರನಾಗಿ ಸ್ವರ್ಗಕ್ಕೆ ಹೋಗುವುದಕ್ಕಾಗಿ ಯಜ್ಞ ಮಾಡಬೇಕೆಂದಿದ್ದೇನೆ. ಅದಕ್ಕೆ ಅವರೇನು ಹೇಳಿದರು-ಬಲ್ಲೆಯೋ? "ಬೇಡ ಬೇಡ—ಆಗುವುದಿಲ್ಲ. ಆ ಯಜ್ಞವಾಗುವುದಿಲ್ಲ" ಎಂದರು. ಯಾಕಾಗುವುದಿಲ್ಲ? ಹಣಕಾಸು ಖರ್ಚು ಮಾಡುತ್ತೇನೆ. ಆಗುವುದಿಲ್ಲವೇ? ಇದನ್ನೇ ಹೇಳಬೇಕೆಂದು ಬಂದೆ. ಮುದುಕನಾದ್ದರಿಂದ ಎಲ್ಲವನ್ನೂ ಮರೆತಿದ್ದಾರೆ. ನೀನು ಕರ್ಮಠನೆಂದೂ ಯೋಗ್ಯನಾದ ಪುರೋಹಿತನೆಂದೂ ಕೇಳಿದ್ದೇನೆ. ನಡೆ. ನೀನು ಯಜ್ಞವನ್ನು ಮಾಡಿಸಿ ಬಿಡು.

ಶಕ್ತಿ—ಮಹಾರಾಜ! ಯಾವ ಕಾರ್ಯವನ್ನು ನಡೆಸಲು ನನ್ನ ತಂದೆಯು ಒಪ್ಪಲಿಲ್ಲವೋ ಆ ಕೆಲಸವನ್ನು ಮಾಡಲು ನಾನು ಮುಂದುವರಿಯಲಾರೆ.

ತ್ರಿಶಂಕು—ಅವನಿಗೆ ಗೊತ್ತಿಲ್ಲ—ಅದರಿಂದಲೇ ಒಪ್ಪ

ಲಿಲ್ಲ. ನಿನ್ನ ಕೈಯಲ್ಲಾಗದಿದ್ದರೆ ಸ್ಪಷ್ಟವಾಗಿ ಹೇಳು. ನಾನು ಬೇರೆ ಪುರೋಹಿತನನ್ನು ಗೊತ್ತು ಮಾಡಿಕೊಳ್ಳುವೆನು. ಸಶರೀರನಾಗಿ ಸ್ವರ್ಗಕ್ಕೆ ಹೋಗುವೆನೆಂದು ರಾಣಿಯೊಡನೆ ಹಟ ಹಾಕಿಕೊಂಡಿರುವೆನು. ಈಗಲೇ ಯಾವುದಾದರೂ ಒಂದು ಸ್ಪಷ್ಟವಾದ ಜವಾಬನ್ನು ಹೇಳಿಬಿಡು.

ಶಕ್ತಿ—ಮಹಾರಾಜ ! ತಂದೆಯು ಸಮ್ಮತಿಸದೇ ಇದ್ದದ್ದಕ್ಕೆ ನಾನು ಸಮ್ಮತಿಸುವುದು ಹೇಗೆ ?

ತ್ರಿಶಂಕು—ಬೇಡ. ಬೇಡ. ನಿಮ್ಮ ತಂದೆಯಂತೆ ಅಹಂಕಾರಿಯಾಗಬೇಡ. ಅವನು ಚೀಣದೇಶಕ್ಕೆ ತಾರಾಮಂತ್ರವನ್ನು ಸಿದ್ಧಿಮಾಡಿಕೊಳ್ಳುವುದಕ್ಕೆ ಹೋಗಿದ್ದನು. ಕುಡಿಯಬಾರದ್ದನ್ನು ಕುಡಿದಿರುವನು, ಅಭಕ್ಷ್ಯ ಭಕ್ಷಣವನ್ನು ಮಾಡಿರುವನು. ತಿರಿಗಿ ಬ್ರಾಹ್ಮಣನೆಂದು ಬಂದು ಯಜ್ಞ ಮಾಡಿಸುವನೇನು? ನನ್ನನ್ನು ಯಜಮಾನನ್ನಾಗಿ ಇಟ್ಟುಕೊಳ್ಳಲಪೇಕ್ಷೆಯಿರುವುದಾದರೆ ನಡೆ. ನನ್ನ ಜೊತೆಯಲ್ಲಿ ಬಾ. ನೀವು ನೂರು ಮಂದಿ ಅಣ್ಣತಮ್ಮಂದಿರಿರುವಿರಿ. ಒಳ್ಳೊಳ್ಳೆಯ ಶಾಲು ಜೋಡಿಗಳನ್ನು ಕೊಡುವೆನು. ನಡೆ. ಯಜ್ಞವನ್ನು ಮಾಡಿಸು. ಆಮೇಲೆ ತಿಳಿಯುವೆ. ನಾನು ಬಹಳ ಧಾರಾಳಿ. ಚಿನ್ನದ ಚೆಂಬು, ಚಿನ್ನದತಟ್ಟೆ, ಚಿನ್ನದ •ಬಟ್ಟಲು ಇವುಗಳನ್ನೆಲ್ಲಾ ಕೊಡುವೆನು. ನಾನು ಕೊಡುವ ದಕ್ಷಿಣೆಯಿಂದ ಎರಡು ಮೂರು ವರ್ಷಗಳ ಕಾಲ ಸಂಸಾರದ ಖರ್ಚಿಗಾಗಿ ತಾಪತ್ರ

ಯದ ಯೋಚನೆಯೇ ಇರುವುದಿಲ್ಲ. ಯೋಚನೆ ಮಾಡು. ಇಂತಹ ಉದಾರಿಯಾದ ಯಜಮಾನ ನನ್ನು ಬಿಟ್ಟು ಬಿಡಬೇಡ.

ಶಕ್ತಿ—ಇಲ್ಲ. ಮಹಾರಾಜ. ನಮ್ಮ ತಂದೆಯು ಸಮ್ಮತಿ ಸದೇ ಇದ್ದದ್ದಕ್ಕೆ ನಾನು ಸಮ್ಮತಿಸಲಾರೆ.

ತ್ರಿಶಂಕು—ನಿಮ್ಮಪ್ಪ ಹಾಳಾದ! ನೀನು ಹಾಳಾಗುವಿ ಯೇನು? ಅವನಿಗೆ ಬ್ರಾಹ್ಮಣ್ಯವಿನ್ನೆಲ್ಲಿಯದು?

ಶಕ್ತಿ—ನರಾಧಮ! ಪುನಃ ಪುನಃ ಬ್ರಹ್ಮರ್ಷಿಯನ್ನು ನಿಂದಿಸುತ್ತಿರುವೆ. ಚಂಡಾಲ ಬುದ್ಧಿಯಂತೆ ದೂಷಿ ಸುವೆ. ನಿನಗೆ ಚಂಡಾಲತ್ವವು ಪ್ರಾಪ್ತವಾಗಲಿ. (ಶಕ್ತಿಯು ಹೋಗುವನು)

ತ್ರಿಶಂಕು—ಅಯ್ಯೋ! ಶಾಪವನ್ನು ಕೊಟ್ಟನಲ್ಲವೆ? ಇರಲಿ! ನಾನು ಸಶರೀರನಾಗಿ ಸ್ವರ್ಗಕ್ಕೆ ಹೋಗು ವೆನು. ನೋಡೋಣ. (ತ್ರಿಶಂಕುವು ಹೋಗುವನು)

## ವನ ಮಧ್ಯದಲ್ಲಿ ನದೀತಿರ

(ಚಂಡಾಲತ್ವವನ್ನು ಹೊಂದಿದ ತ್ರಿಶಂಕುವಿನ ಪ್ರವೇಶ.)

ತ್ರಿಶಂಕು—ಅಯ್ಯೋ! ನಾನು ಅಲೆಯುತ್ತಾ ಅಲೆಯು -ಯುತ್ತಾ ಎಲ್ಲಿಗೆ ಬಂದೆ? ರಾತ್ರಿ ನನಗೆ ಯಾರೂ ಸಿಕ್ಕಲಿಲ್ಲವಲ್ಲಾ? ಮಹರ್ಷಿ! ಮಹರ್ಷಿ! ಸೇನಾ ಪತಿ! ಸೇನಾಪತಿ! ಯಾರನ್ನೂ ಕಾಣೆನಲ್ಲಾ? ಮಂತ್ರಿ! ಮಂತ್ರಿ! ಒಬ್ಬರೂ ಸಿಕ್ಕಲಿಲ್ಲವಲ್ಲಾ?

ಕೂಗಿ ಕೂಗಿ ಬಾಯಿ ಒಣಗಿ ಹೋಗಿದೆ. ಈ ನದಿಯಲ್ಲಿ ಒಂದೆರಡು ಬೊಗಸೆ ನೀರನ್ನು ಕುಡಿಯುವೆನು. (ನೀರು ಕುಡಿಯುವುದಕ್ಕೆ ಮುಂದುವರಿದು ತನ್ನ ಪ್ರತಿಬಿಂಬವನ್ನು ನೋಡಿ) ಅಬ್ಬಬ್ಬಾ! ಇದು ಯಾರ ಮುಖ? ಈ ನದಿಯಲ್ಲಿ ರಾಕ್ಷಸನೊಬ್ಬನಿಲ್ಲವೇನು? ಛೀ! ಛೀ! ಛೀ! ಇದು ನನ್ನ ಮುಖವೇ ಅಲ್ಲವೇ? ಹೌದು, ಹೌದು. ನನ್ನ ಮುಖವೇನೋ ಹೌದು. ನಾನು ಏನು ಮಾಡಿದೆ?-ಆಹಾ —ಅವನೇ ಮಾಡಿದ್ದು. ಹೌದು ನನ್ನ ಮುಖವೇ. ಆ ಮಹರ್ಷಿಯು ಶಾಪವನ್ನು ಕೊಟ್ಟು ಹೋದನಲ್ಲವೆ? ಅದರಿಂದಲೇ. ಈಗ ನಾನೇನು ಮಾಡಲಿ? ನಾನು ಸಶರೀರನಾಗಿ ಸ್ವರ್ಗಕ್ಕೆ ಹೋಗಬೇಕು. ರಾಣಿಯೊಡನೆ ಹಠ ಹಾಕಿಕೊಂಡಿರುವೆನು. ಅಯ್ಯೋ! ಏನಾಗಿ ಹೋಯಿತು.

(ಬ್ರಹ್ಮಣ್ಯದೇವ ಮತ್ತು ಸದಾನಂದರ ಪ್ರವೇಶ)

ಬ್ರಹ್ಮಣ್ಯ—ಅಯ್ಯಾ ಮಹಾರಾಜ! ನೀನು ವಿಶ್ವಾಮಿತ್ರನನ್ನು ಪುರೋಹಿತನನ್ನಾಗಿ ಮಾಡಿಕೋ.

ತ್ರಿಶಂಕು—ಈವಾಗ ನಿನ್ನನ್ನು ಗುರುತು ಹಿಡಿದೆ. ನೀನು ರಾಕ್ಷಸನ ಮಗ.

ಬ್ರಹ್ಮಣ್ಯ—ನೀನು ನನ್ನನ್ನು ಬೈಯ್ಯುವುದೇಕೆ?

ತ್ರಿಶಂಕು—ಬೈಯ್ಯುವುದೇನು? ನಿನ್ನ ಸ್ವರೂಪವನ್ನು ಹೇಳಿದೆ. ನೀನು ಇಷ್ಟು ದಿನ ಏಕೆ ಗುಟ್ಟಾಗಿ ಬೆಣ್ಣೆ

ಯನ್ನು ಹೇಗೆ ಕದ್ದುಕೊಂಡು ತಿನ್ನುತ್ತಿದ್ದೆಯೆಂ ಬುದು ಗೊತ್ತಾಯಿತು.

ಬ್ರಹ್ಮಣ್ಯ—ಏನು ಗೊತ್ತಾಯಿತು?

ಸದಾ—ಇವನು ನಿನಗೇನಾಗಬೇಕು?

ಬ್ರಹ್ಮಣ್ಯ—ನನಗೇನಾಗಬೇಕು? ಇವನೇ ಮಹಾರಾಜ ತ್ರಿಶಂಕು.

ಸದಾ—ನಿನ್ನ ಎದುರಿಗೆ ಮಹಾರಾಜ ತ್ರಿಶಂಕುವು ನಿಶ್ಚಯವಾದರೆ, ಇವನಿಗೆ ಇಷ್ಟು ದೊಡ್ಡ ಹೊಟ್ಟೆಯಾಗಿರುವುದೇಕೆ?

ಬ್ರಹ್ಮಣ್ಯ—ಇಲ್ಲ. ಇವನು ನಿಜವಾಗಿಯೂ ರಾಜಾ ತ್ರಿಶಂಕು. ವಸಿಷ್ಠನ ಮಗನ ಶಾಪದಿಂದ ಚಂಡಾಲತ್ವವನ್ನು ಹೊಂದಿರುವನು.

ಸದಾ—ಗೊತ್ತಾಯಿತು. ಇವನು ನಿನಗೇನಾಗಬೇಕು?

ಬ್ರಹ್ಮಣ್ಯ—ನನಗೇನಾಗುವನು?

ಸದಾ—ಊಟಕ್ಕೋಸ್ಕರ ನನ್ನನ್ನಿಲ್ಲಿಗೆ ಕರೆ ತಂದೆಯೋ?

ಬ್ರಹ್ಮಣ್ಯ—ಬ್ರಾಹ್ಮಣ! ನಡೆಯುವ ಹಾಗಿದ್ದರೆ ನಡೆ. ಇಲ್ಲದಿದ್ದರೆ ನಿನ್ನ ಕತ್ತನ್ನು ಕಬ್ಬು ಮುರಿಯುವ ಹಾಗೆ ಮುರಿಯುವೆನು.

ಸದಾ—ನಾನು ಬರುವುದಿಲ್ಲವೆಂದರಲ್ಲವೆ? ಏನೇನು ಕೊಡಿಸುವೆ? ಹೇಳು. ಒಳ್ಳೆ ಭಕ್ಷ್ಯಗಳುಂಟೋ ಇಲ್ಲವೋ?

ಬ್ರಹ್ಮಣ್ಯ—ಇವನನ್ನು ಈ ತೋಟದೊಳಕ್ಕೆ ಕರೆದು ಕೊಂಡು ಹೋದರೆ ಸೊಗಸಾದ ಊಟವೂ ದೊರೆಯುವುದು.

ಸದಾ—ನೀನು ನಡೆ. ನಾನು ಕೈ ಹಿಡಿದು ಇವನನ್ನು ನಿಲ್ಲಿಸುವೆನು.

ಬ್ರಹ್ಮಣ್ಯ—ನನ್ನ ಮಾತು ಕೇಳು. ಅವನ ಹತ್ತಿರ ಹೋಗಬೇಡ.

ಸದಾ—ನೀನೇ ಹೋಗಿದ್ದೆಯಲ್ಲವೆ ? ಅವನಲ್ಲಿ ಮಾತಾಡುತ್ತೀಯಲ್ಲವೆ? ನನ್ನನ್ನು ಮಾತ್ರ ಹೋಗಬೇಡವೆನ್ನುವುದೇಕೆ ?

ಬ್ರಹ್ಮಣ್ಯ—ಅವನು ನನ್ನನ್ನು ನೋಡಲಾರ.

ಸದಾ—ಏಕೆ ನೋಡಬೇಕು ? ನನ್ನಂತೆಯೇ ಇದ್ದಿದ್ದರೆ ನೋಡುತ್ತಿದ್ದ.

ಬ್ರಹ್ಮಣ್ಯ—ಹಾಗಾದರೆ ನೋಡು. ಈ ಘೋರ ವನದಲ್ಲಿ ನೀನೊಬ್ಬನೇ ಇರು.

(ಬ್ರಹ್ಮಣ್ಯ ದೇವನು ಹೋಗುವನು)

ಸದಾ—ಅಪ್ಪಾ ಘೋರವನವೇನೋ ನಿಶ್ಚಯ. ಎಲ್ಲಿಯೋ ಹೋಗಿ ಕೊನೆಗೆ ಉಳಿದ ರಾಕ್ಷಸನ ಬಾಯಿಗೆ ತುತ್ತಾದೆನಲ್ಲಾ !

ತ್ರಿಶಂಕು—ಅಯ್ಯೋ ! ಚಂಡಾಲನಾಗಿ ಹೋದೆನಲ್ಲಾ! ಈಗ ಸಶರೀರನಾಗಿ ಸ್ವರ್ಗಕ್ಕೆ ಹೋಗುವುದು ಹೇಗೆ?

ಸದಾ—ಇದೆಂತಹ ಧ್ವನಿಯಲ್ಲಿ ಮಾತನಾಡುತ್ತಾನೆ. ಕಣ್ಣಿಗೆ ಕಾಣಿಸದೇನೇ ಹೀಗೆ—?

ತ್ರಿಶಂಕು—ಈಗ ಕಾಡಿನಿಂದ ಹೊರಗೆ ಹೋಗುವುದು ಹೇಗೆ? ಇಲ್ಲಿ ಯಾರೋ ಒಬ್ಬನು ನಿಂತಿದ್ದಾನೆ. ಅವನನ್ನು ದಾರಿಯನ್ನು ಕೇಳುವೆನು. ಅವನು ದಾರಿಯನ್ನು ಹೇಳಬಹುದು. ಅಯ್ಯಾ! ಒಂದು ಕೆಲಸವನ್ನು ಮಾಡಬಲ್ಲೆಯಾ!

ಸದಾ—ಏನು? ನಿನ್ನ ಹಣೆಯಲ್ಲಿ ತಿಲಕವಿಲ್ಲವೇಕೆ? ನೀನು ನನ್ನ ಮೂಳೆಗಳನ್ನು ಮುರಿದು ಹಾಕುವಿಯೇನು?

ತ್ರಿಶಂಕು—ಮುರಿಯುವುದಿಲ್ಲ. ನನಗೆ ದಾರಿ ಗೊತ್ತಿಲ್ಲ. ನನಗೆ ದಾರಿ ತೋರಿಸು. ಇಲ್ಲಿಂದ ಹೇಗೆ ಹೋಗಬೇಕು? ಹೇಳಿಬಿಡು.

ಸದಾ—ಇದೋ ಎದುರಿಗೆ ನದಿ. ಇದರ ಕೆಳಗೆ ನೇರವಾಗಿ ಹೊರಟು ಹೋಗು.

ತ್ರಿಶಂಕು—ಇಲ್ಲ, ಇಲ್ಲ, ಮುಳುಗಿಯೇ ಹೋಗುವೆನು. ನಾನು ಈಜು ಕಲಿತಿಲ್ಲ. ನಾನು ಮಹಾರಾಜಾ ತ್ರಿಶಂಕು. ದಾರಿ ತೋರಿಸಿದರೆ ನಿನ್ನ ತೂಕ ಚಿನ್ನವನ್ನು ಕೊಡುತ್ತೇನೆ.

ಸದಾ—ನೀನು ರಾಜಾ ಅನ್ನುವುದು ಗೊತ್ತು. ಇಂತಹ ರಾಜಮೂರ್ತಿಯನ್ನು ಹೇಗೆ ಸಂಪಾದಿಸಿದೆ? ಇಲ್ಲಿಗೆ ತಾನೇ ಹೇಗೆ ಬಂದೆ?

ತ್ರಿಶಂಕು—ಆ ಮಹರ್ಷಿ ವಸಿಷ್ಠನ ಮಗನು ಶಾಪವನ್ನು ಕೊಟ್ಟನು. ನಾನು ದಿಕ್ಕುಗಳೇ ಗೊತ್ತಿಲ್ಲದೇ ಅಲೆಯುತ್ತಿರುವೆನು.

ಸದಾ—ದಿಕ್ಕು ಗೊತ್ತಾಗದೇ ಇದ್ದದ್ದೇ ಒಳ್ಳೆಯದು. ನೀನು ಈ ಕೆಟ್ಟ ರೂಪದಿಂದ ರಾಜ್ಯಕ್ಕೆ ಹೋದರೆ ಪ್ರಜೆಗಳು ರಾಜ್ಯದಿಂದ ಪಲಾಯನರಾಗುವರು.

ತ್ರಿಶಂಕು—ಅಪ್ಪಾ! ಹೇಗಾದರೂ ದಾರಿ ತೋರಿಸಿಬಿಡು. ನಾನು ಸಶರೀರನಾಗಿ ಸ್ವರ್ಗಕ್ಕೆ ಹೋಗಬೇಕು. ಯಾರಾದರೂ ಮುನಿಗಳನ್ನು ಪುರೋಹಿತರನ್ನಾಗಿ ಮಾಡಿಕೊಂಡು ಯಜ್ಞವನ್ನು ಮಾಡುತ್ತೇನೆ.

ಸದಾ—(ಸ್ವಗತ) ನೋಡೋಣ. ವಿಶ್ವಾಮಿತ್ರ ರಾಜನನ್ನು ಹಿಂದಿರುಗಿಸಲಾಗಲಿಲ್ಲ. ವಿಶ್ವಾಮಿತ್ರನ ಹತ್ತಿರಕ್ಕೆ ಕಳುಹಿಸಲು ಅವಕಾಶ ದೊರಕಿತು. (ಪ್ರಕಾಶ) ಪುರೋಹಿತನನ್ನು ಹುಡುಕುತ್ತಿರುವೆಯಾ? ಮಹಾತಪಸ್ವಿಯಾದ ವಿಶ್ವಾಮಿತ್ರನು ಈ ವನದಲ್ಲಿಯೇ ಇರುವನು. ಅವನನ್ನು ಮರೆ ಹೋಗುವೆಯಾ?

ತ್ರಿಶಂಕು—ಖಂಡಿತವಾಗಿಯೂ ಮರೆಹೊಗುವೆನು. ನಿಶ್ಚಯ. ನನಗೆ ಆತನೇ ಬೇಕಾಗಿದ್ದದ್ದು. ಆತನು ವಸಿಷ್ಠನೊಡನೆ ಜಗಳವಾಡಿರುವನು. ನಾನು ಅವನನ್ನೇ ಪುರೋಹಿತನನ್ನಾಗಿ ಮಾಡಿಕೊಳ್ಳುವೆನು.

ಸದಾ—ಅಲ್ಲಿ ನೋಡು. ಆತನಿದ್ದಾನೆ. ಹೋಗಿ ನಮ

ಸ್ಕಾರ ಮಾಡಿ ಕಾಲುಗಳನ್ನು ಹಿಡಿದುಕೋ. ಏನಾದರೂ ಬಿಡಬೇಡ.

(ಸದಾನಂದನು ಹೋಗುವನು.)

ವಿಶ್ವಾಮಿತ್ರ—ಇಂದಿನಿಂದ ಅನಾಹಾರಿಯಾಗಿ ಮಹಾತಪಸ್ಸನ್ನು ಮಾಡತೊಡಗುವೆನು. ಇಷ್ಟಾರ್ಥ ಸಿದ್ಧಿಯಾಗಬೇಕು. ಇಲ್ಲದಿದ್ದರೆ ದೇಹವು ಹೋಗಬೇಕು. ಶಾಸ್ತ್ರ ವಾಕ್ಯಗಳು ಸತ್ಯವಾಗಿರುವುದಾದರೆ ತಪಃಫಲದಿಂದ ಇಷ್ಟಲಾಭವು ಆಗಿಯೇ ಆಗುವುದು. ಈ ರಮಣಿಯು ಯಾರು? ಇವಳು ಆ ಹುಚ್ಚಿಯಲ್ಲವೆ? ಈಕೆಯು ನನಗೆ "ತಪಃ ಪ್ರಭಾವದಿಂದಲೇ ಮನುಷ್ಯನು ಬ್ರಾಹ್ಮಣನಾಗುವುದು, ತಪಸ್ಸೇ ಬ್ರಾಹ್ಮಣನ ಬ್ರಾಹ್ಮಣತ್ವ" ಎಂದು ಶಾಸ್ತ್ರ ಪ್ರಮಾಣವನ್ನು ಕೊಟ್ಟಳು. ಬ್ರಾಹ್ಮಣನ ಮನೆಯಲ್ಲಿ ಹುಟ್ಟಿದರೆ ತಪೋ ವಿಧಾನವನ್ನು ಕಲಿಯಬಹುದು. ಇದೇ ಬ್ರಾಹ್ಮಣ ಕುಲದಲ್ಲಿ ಹುಟ್ಟುವುದರ ಗೌರವ. ನಿರ್ಮಲ ಚಿತ್ತರು ಯಾರೋ ಅವರಿಗೆ ವೇದಮಾತೆಯು ಖಂಡಿತವಾಗಿಯೂ ಪ್ರಸನ್ನಳಾಗುವಳು.

ತ್ರಿಶಂಕು—ಸ್ವಾಮಿ! ಸ್ವಾಮಿ! ನೀವು ವಿಶ್ವಾಮಿತ್ರರು ನಿಶ್ಚಯವೇನು? ಸ್ವಾಮಿ! ನಾನು ತಮ್ಮನ್ನು ಮರೆಹೊಕ್ಕಿರುವೆನು. ತಾವು ನನ್ನನ್ನು ಸಂರಕ್ಷಿಸಬೇಕು.

ವಿಶ್ವಾ—ನೀನು ಯಾರು?

ತ್ರಿಶಂಕು—ನಾನು ತ್ರಿಶಂಕು ಮಹಾರಾಜ, ಸ್ವಾಮಿ!

ವಿಶ್ವಾ—ನಿನಗೆ ಈ ರೂಪು ಏಕೆ ಬಂತು ?

ತ್ರಿಶಂಕು—ಆ ವಸಿಷ್ಠ ಮಹರ್ಷಿಯ ಮಗ ಶಕ್ತ್ರಿಯು ನನಗೆ ಶಾಪವನ್ನು ಕೊಟ್ಟಿರುವನು ! ಸ್ವಾಮಿ !

ವಿಶ್ವಾ—ಏತಕ್ಕಾಗಿ ಶಾಪವನ್ನು ಕೊಟ್ಟನು ?

ತ್ರಿಶಂಕು—ನಾನು ಸಶರೀರನಾಗಿ ಸ್ವರ್ಗಕ್ಕೆ ಹೋಗ ಬೇಕೆಂದು ವಸಿಷ್ಠನ ಹತ್ತಿರ ಹೇಳಿದೆನು. ಯಜ್ಞವನ್ನು ಮಾಡಿಸೆಂದೂ ಕೇಳಿಕೊಂಡೆನು. ಆತನು "ಆಗುವುದಿಲ್ಲ" ವೆಂದು ಹೇಳಿಬಿಟ್ಟನು. ಅವನು ಬಹಳ ಒಳ್ಳೆಯ ಮನುಷ್ಯನೆಂದೇ ತಿಳಿದುಕೊಂಡಿದ್ದೆನು. ಕೂಡಲೆ ಪುರೋಹಿತನ ಮನೆಯನ್ನು ಬಿಟ್ಟು ಅವನ ಮಗನ ಸಮೀಪಕ್ಕೆ ಬಂದೆನು. ಆತನು ನನಗೆ ಶಾಪ ಕೊಟ್ಟನು. ಸ್ವಾಮಿ ! ತಾವು ನನ್ನನ್ನು ರಕ್ಷಿಸಬೇಕು. ನಾನು ನನ್ನ ರಾಣಿಯೊಡನೆ ಹಟ ಹಾಕಿಕೊಂಡಿರುವೆನು. ಸಶರೀರನಾಗಿ ಸ್ವರ್ಗಕ್ಕೆ ಹೋಗಲೇಬೇಕು. ನಾನು ತಮಗೆ ಶರಣಾಗತನಾಗಿರುವೆನು. ತಾವು ನನಗೆ ಪುರೋಹಿತರಾಗಬೇಕು, ಸ್ವಾಮಿ ! ಶರಣಾಗತನಾದ ನನ್ನನ್ನು ತಳ್ಳಿ ಬಿಡಬಾರದು.

ವಿಶ್ವಾ—ರಾಜ ! ನಿನ್ನ ಪ್ರಾರ್ಥನೆಯನ್ನು ನಡೆಸಿಕೊಡುವುದು ಹೇಗೆ ? ನೀನು ಸಂಸಾರಿಯಾಗಿರುವೆ. ನಾನು ಸಂಸಾರವನ್ನು ತ್ಯಾಗಮಾಡಿರುವೆನು. ನಾನು ಪುರೋಹಿತನಾಗುವುದು ಹೇಗೆ ?

(ಸುನೇತ್ರಾದೇವಿಯ ಪ್ರವೇಶ)

ಸುನೇತ್ರಾ—ಇಲ್ಲ. ಪ್ರಭು ! ತಾವು ಸಂಸಾರ ತ್ಯಾಗಿಗಳಲ್ಲ. ತಾವು ತಮ್ಮ ಸತಿಯೊಡಗೂಡಿ ತಪಸ್ಸನ್ನು ಮಾಡುತ್ತಿರುವಿರಿ. ನಾನು ತಮ್ಮ ತಪಸ್ಸಿಗೆ ಸಹಕಾರಿಯಾಗಿ ತಮ್ಮ ಸಹಧರ್ಮಿಣಿಯಾಗಿರುವೆನು.

ವಿಶ್ವಾ—ಯಾರು ? ರಾಣಿಯೆ ?

ಸುನೇತ್ರಾ—ನಾನು ರಾಣಿಯಲ್ಲ. ನಾನು ತಪಸ್ವಿಯ ಸಹ ಧರ್ಮಿಣೀ-ತಪಸ್ವಿನೀ.

ವಿಶ್ವಾ—ನೀನು ಎಲ್ಲಿದ್ದೆ ?

ಸುನೇತ್ರಾ—ನನ್ನ ಸ್ವಾಮಿಯ ಆಶ್ರಮದಲ್ಲಿ-ಈ ತಪೋವನದಲ್ಲಿಯೇ.

ವಿಶ್ವಾ—ಓಹೋ ! ಈಗ ಗೊತ್ತಾಯಿತು. ಯಾರು ನಿತ್ಯವೂ ಹೂವನ್ನು ಕೊಯಿದಿಡುತ್ತಿದ್ದರು, ಯಾರು ನೀರನ್ನುತಂದಿಡುತ್ತಿದ್ದರು ಎಂಬುದು ಈಗ ಗೊತ್ತಾಯಿತು. ನಿಜವಾಗಿಯೂ ನೀನು ನನ್ನ ಸಹಧರ್ಮಿಣೀ. ನೋಡು. ಈಗ ಒಂದು ವಿಪತ್ತು ಒದಗಿರುವುದು. ತ್ರಿಶಂಕು ಮಹಾರಾಜನು ಶರಣಾಗತನಾಗಿರುವನು.

ಸುನೇತ್ರಾ—ಇದೇನು ವಿಪತ್ತು ! ಪ್ರಭು ! ಶಾಪಗ್ರಸ್ತನಾಗಿರುವ ಈ ರಾಜನನ್ನು ಉದ್ಧಾರ ಮಾಡುವ ಶಕ್ತಿಯು ತಮಗಲ್ಲದೆ ಮತ್ತಾರಿಗಿರುವುದು. ಈಗ ದೀನನೂ ಶರಣಾಗತನೂ ಆಗಿರುವ ಈತನಿಗೆ ಆಶ್ರಯವನ್ನು ಕೊಟ್ಟು ಲೋಕದಲ್ಲಿ ತಮ್ಮ ಶಕ್ತಿಯನ್ನು

ಪ್ರಕಾಶಗೊಳಿಸಬೇಕು. ರಾಜನ ಮನೋಭಿಲಾಷೆಯನ್ನು ಪೂರ್ತಿಗೊಳಿಸಬೇಕು.

ವಿಶ್ವಾ—ಪ್ರಿಯೆ! ಸತ್ಯವನ್ನೇ ಹೇಳಿದೆ. ಆಶ್ರಯದಾನವೇ ಮುಖ್ಯವಾದ ತಪಸ್ಸು. (ತ್ರಿಶಂಕುವನ್ನು ಕುರಿತು) ಮಹಾರಾಜ! ನಿನ್ನ ಯಜ್ಞವನ್ನು ನಡೆಸುವುದಕ್ಕೆ ಪೌರೋಹಿತ್ಯವನ್ನು ಅಂಗೀಕರಿಸಿರುವೆನು. ನೀನು ಯಜ್ಞಕ್ಕೆ ಅವಶ್ಯಕವಾದ ಏರ್ಪಾಡುಗಳನ್ನು ನಡೆಸು. ನಾನು ಯಜ್ಞವನ್ನು ಪೂರ್ಣ ಮಾಡುವೆನು.

ತ್ರಿಶಂಕು—ಇವನೀಗ ಋಷಿ! ಎಲ್ಲರೂ ಒಪ್ಪಿಕೊಳ್ಳಬಹುದಾದ ಋಷಿ, ಇಲ್ಲದಿದ್ದರೆ ಮಹರ್ಷಿಯೇ ಇರಬಹುದು. ವಸಿಷ್ಠನೂ ಮಹರ್ಷಿಯೆ! ಈಗಲೇ ಎಲ್ಲವನ್ನೂ ಸಿದ್ಧಗೊಳಿಸುವೆನು. ತಮ್ಮ ಕೃಪೆಯಿಂದ ನಾನು ದಾರಿಯನ್ನು ಕಂಡು ಹಿಡಿಯಲು ಶಕ್ತನಾದೆನು. ಈಗಲೇ ಹೊರಡುವೆನು. ಈ ನನ್ನ ರೂಪವನ್ನು ಬದಲಾಯಿಸಿ ಕೊಡಬೇಕು. ರೂಪವು ಬಹಳ ಕೆಟ್ಟದೆ.

ವಿಶ್ವಾ—ಯೋಚಿಸಬೇಡ. ನೀನು ಈ ರೂಪದಿಂದಲೇ ಸ್ವರ್ಗಕ್ಕೆ ಹೋಗುವೆ. ಅಲ್ಲಿ ದೇವಶರೀರವನ್ನು ಹೊಂದುವೆ.

(ಎಲ್ಲರೂ ಹೋಗುವರು)

**ಕಾಡುದಾರಿ.**

[ವಿಶ್ವಾಮಿತ್ರ ಮತ್ತು ಬ್ರಾಹ್ಮಣ ವೇಷಧಾರಿಯಾದ ಇಂದ್ರ—ಇವರ ಪ್ರವೇಶ.]

ಇಂದ್ರ—ಎಲೈ ರಾಜರ್ಷಿಯೆ! ನಿನಗೆ ಇದೇನು ಬುದ್ಧಿ ಭ್ರಮೆ! ನಿನ್ನ ಮಹದಭಿಲಾಷೆಯನ್ನು ಬಿಟ್ಟು ಆಗದ ಕೆಲಸಕ್ಕೆ ಕೈ ಹಾಕುತ್ತಿರುವೆಯಲ್ಲಾ? ತ್ರಿಶಂಕುವು ಮಾನವ ಶರೀರದೊಡನೆ ಸ್ವರ್ಗಕ್ಕೆ ಯಾವ ಮಹಾ ಪುಣ್ಯ ಪ್ರಭಾವದಿಂದ ಹೋಗಬೇಕು? ಬ್ರಹ್ಮ ಶಾಪಗ್ರಸ್ತನಾದವನು ಜಪತಪಸ್ಸುಗಳನ್ನು ಮಾಡಿ ಕೊಂಡು ಶಾಪ ವಿಮೋಚನೆಯ ದಾರಿಯನ್ನು ಹು ಡುಕದೆ ಸ್ವರ್ಗಕ್ಕೆ ಹೋಗಲೆಳಸುವುದು ಸರಿಯೆ? ಪುರೋಹಿತನಾಗುವೆನೆಂದು ಒಪ್ಪಿಕೊಂಡಿರುವೆಯ ಲ್ಲವೆ? ನಿನ್ನ ಹಿತಕ್ಕೋಸ್ಕರ ಹೇಳುವೆನು. ಕೇಳು. ನಿನ್ನ ಅಭಿಷ್ಟಸಾಧನೆಯಲ್ಲಿ ನಿರತನಾಗು. ಯಜ್ಞವು ಪೂರ್ಣವಾಗುವುದು ಸಂಭವವೇ? ಜನರ ಪರಿಹಾ ಸಕ್ಕೆ ನೀನು ಅನ್ಯಾಯವಾಗಿ ಗುರಿಯಾಗುವೆಯಲ್ಲಾ? ಆಗದಿರುವ ಕೆಲಸಕ್ಕೆ ಕೈ ಹಾಕಬೇಡ. ನನ್ನ ಹಿತೋ ಕ್ತಿಗಳಿಗೆ ಕಿವಿಗೊಡು.

ವಿಶ್ವಾ—ಯಜ್ಞೋಪವೀತಧಾರಣೆಯಿಂದ ಮಾತ್ರವೇ ಬ್ರಾಹ್ಮಣನಾಗಿ ಕಾಣಿಸುತ್ತಿರುವೆ. ನೀನೆಂದೂ ಶಾಸ್ತ್ರಾಭ್ಯಾಸವನ್ನು ಮಾಡಿದುದಿಲ್ಲವೊ? ಮರೆ ಹೊ ಕ್ಕವರನ್ನು ರಕ್ಷಿಸುವುದು ಉಚ್ಚ ಕಾರ್ಯವಲ್ಲವೋ? ಜನರ ಆಡಿಕೆಗೆ ನಾನು ಗುರಿಯಾಗುವೆನೆಂಬ ಭೀತಿ ಯು ನಿನಗೇಕೆ? ನನ್ನ ತಪಃಪ್ರಭಾವದಿಂದ ಅಸಂಭ ವವಾದುದೂ ಸಂಭವಿಸುವುದು. ಶಾಸ್ತ್ರವು ಸುಳ್ಳಲ್ಲ. ಎಲೈ ಬ್ರಾಹ್ಮಣನೆ! ನಿನ್ನ ಕೆಲಸವನ್ನು ನೀನು ನೋಡಿ

ಕೊಂಡು ಹೋಗು. ನಿನ್ನ ಉಪದೇಶದಿಂದ ನನ ಗೇನೂ ಪ್ರಯೋಜನವಿಲ್ಲ.

ಇಂದ್ರ—ನಿನಗೆ ಎಂತಹ ದುರಾಶೆ ! ಇಂದ್ರನು ನಿನಗೆದು ರಾಗಿ ನಿಂತು ತ್ರಿಶಂಕುವಿಗೆ ಸ್ವರ್ಗದಲ್ಲೆಂದಿಗೂ ಸ್ಥಾನವನ್ನು ಕೊಡಲಾರನೆಂಬುದನ್ನು ನೀನು ಅರಿ ಯೆಯೋ ? ಬ್ರಹ್ಮರ್ಷಿಯಾದ ವಸಿಷ್ಠನು ನಿನ್ನ ಈ ಯಜ್ಞಕ್ಕೆ ಬರುವುದಿಲ್ಲ. ದಕ್ಷಯಜ್ಞದಂತೆಯೇ ನಿನ್ನ ಯಜ್ಞವೂ ನಿರರ್ಥಕವಾಗುವುದು. ನಿನ್ನ ಹಿತಕ್ಕಾಗಿ ಯೇ ನೀನು ನಿನ್ನ ವ್ರತಸಾಧನೆಯಲ್ಲಿ ನಿರತನಾಗೆಂದು ಹೇಳಿದೆನು.

ವಿಶ್ವಾ—ನೀನು ಹೀನಮನುಷ್ಯ. ನಿನ್ನ ಯೋಗ್ಯತೆಗೆ ತಕ್ಕಂತೆ ಮಾತನಾಡಿರುವೆ. ದೇವತೆಗಳೊಡಗೂಡಿ ಇಂದ್ರನು ನನಗೆ ವಿರೋಧಿಯಾಗಿ ನಿಲ್ಲಲಿ. ವಸಿಷ್ಠನು ಯಜ್ಞಕ್ಕೆ ಬರದಿದ್ದರೆ, ನಷ್ಟವೇನು ? ಚಿಂತೆಯೇಕೆ ? ನನ್ನ ತಪೋಬಲದಿಂದ ಯಜ್ಞವನ್ನು ಪೂರ್ಣಮಾಡು ವುದು ಖಂಡಿತ. ತ್ರಿಶಂಕುವು ಸಶರೀರನಾಗಿಯೂ ಸ್ವರ್ಗವನ್ನು ಪ್ರವೇಶಿಸಿ ಸ್ಥಾನವನ್ನು ಪಡೆಯುವನು. ನನ್ನ ಕಾರ್ಯಕ್ಕೆ ವಿಘ್ನಮಾಡುವ ಶಕ್ತಿ ಯಾರಿಗಿರು ವುದು ?

ಇಂದ್ರ—ಎಲೈ ರಾಜರ್ಷಿಯೆ ! ನಾನು ಇಂದ್ರನ ಹೇಳಿ ಕೆಯಂತೆ ಬಂದೆನು. ಬ್ರಹ್ಮಶಾಪದಿಂದ ಚಂಡಾಲತ್ವ ವನ್ನು ಹೊಂದಿರುವಾತನು ಇಂದ್ರನಿಂದ ಸ್ವರ್ಗ ದಲ್ಲೆಂದಿಗೂ ಸ್ಥಾನವನ್ನು ಪಡೆಯಲಾರನು.

ವಿಶ್ವಾ—ಬ್ರಾಹ್ಮಣ ! ದೇವೇಂದ್ರನಿಗೆ ಹೇಳು ಹೋಗು. ನಾನು ಮಾಡಿರುವ ಪ್ರತಿಜ್ಞೆಯನ್ನೆಂದಿಗೂ ನಡೆಸದೇ ಬಿಡನೆಂದುಹೇಳು. ನನ್ನ ಮರೆಹೊಕ್ಕವರನ್ನು ಕಾಪಾಡಬೇಕಾದುದು ನನ್ನಧರ್ಮ. ತ್ರಿಶಂಕುವು ನನ್ನ ಆಶ್ರಿತ. ಅವನಿಗೆ ನಾನು ವಾಗ್ದಾನಮಾಡಿರುವೆನು. ಯಜ್ಞಕ್ಕೆ ತಕ್ಕ ಸಲಕರಣೆಗಳೆಲ್ಲವೂ ಸಿದ್ಧವಾಗಿರುವುವು. ಎಂದಿಗೂ ಯಜ್ಞವು ನಿಲ್ಲುವುದಿಲ್ಲ.

(ವಿಶ್ವಾಮಿತ್ರನು ಹೋಗುವನು.)

ಇಂದ್ರ—ಬ್ರಹ್ಮಶಾಪಗ್ರಸ್ತನಾದ ಪಾಪಿಗೆ ಸ್ವರ್ಗದಲ್ಲಿ ಸ್ಥಾನ ಕೊಡುವುದಾದರೆ, ದೇವತೆಗಳೆಲ್ಲರೂ ಸ್ವರ್ಗ ಭ್ರಷ್ಟರಾಗಬೇಕು. ಮಾಡಬಾರದ ಕೆಲಸಗಳಿಗೇ ವಿಶ್ವಾಮಿತ್ರನು ಕೈ ಹಾಕುತ್ತಿರುವನು. ಕ್ಷತ್ರಿಯ ಶರೀರದಿಂದಲೇ ಬ್ರಾಹ್ಮಣನಾಗಲೆಳಿಸುತ್ತಿರುವನು. ರಾಜರ್ಷಿಯಾಗಿಯೂ ಇಷ್ಟು ಗರ್ವದಿಂದ ಪಾಪಿಯನ್ನು ಮಾನವ ಶರೀರದಿಂದ ಸ್ವರ್ಗಕ್ಕೆ ಕಳುಹಿಸಲೆಳಿಸುತ್ತಿರುವನು. ಇವನು ಬ್ರಹ್ಮರ್ಷಿಯಾದರೆ ಬ್ರಹ್ಮಾಂಡವು ಉಳಿಯುವಹಾಗಿಲ್ಲ. ಮೊಳಕೆಯಲ್ಲೇ ಈ ಕೆಟ್ಟಕೆಲಸವನ್ನು ಕತ್ತರಿಸಬೇಕು. ಪ್ರಾಣವನ್ನಾದರೂ ಕೊಟ್ಟು ಈತನ ಸಂಕಲ್ಪವನ್ನು ಭಂಗಮಾಡುವೆನು.—ಖಂಡಿತ.

(ಇಂದ್ರನು ಹೋಗುವನು.)

(ಇತರ ಋಷಿಗಳೊಡನೆ ವಿಶ್ವಾಮಿತ್ರನ ಪ್ರವೇಶ.)

ವಿಶ್ವಾ—ತ್ರಿಶಂಕು ಮಾಡುವ ಯಜ್ಞಕ್ಕೆ ಎಲ್ಲರೂ ಬರು ವರು. ವಸಿಷ್ಠನ ಮಕ್ಕಳು ಮಾತ್ರ ಬರುವುದಿಲ್ಲ. ಅವರು ಬರದಿರಲು ತೊಂದರೆಯೇನು?

ಒಬ್ಬ ಋಷಿ—ಪುನಃ ಮತ್ತೇನು ಯಜ್ಞ! ಯಜಮಾನ ನು ಚಂಡಾಲ (ಯಜ್ಞಮಾಡುವವನು). ಯಾಜಕ (ಯಜ್ಞಮಾಡಿಸುವವನು) ಕ್ಷತ್ರಿಯ. ದೇವತೆಗಳೂ ಋಷಿಗಳೂ ಈ ಯಜ್ಞದಲ್ಲಿ ಹವಿಸ್ಸನ್ನು ತೆಗೆದು ಕೊಳ್ಳುವುದಿಲ್ಲ. ನಾವು ಬ್ರಾಹ್ಮಣರು. ಚಂಡಾಲ ನಿಂದ ಕೊಡಲ್ಪಟ್ಟ ಭೋಜ್ಯದ್ರವ್ಯವನ್ನು ತಿನ್ನುವುದು ಹೇಗೆ? ಬ್ರಹ್ಮರ್ಷಿಯಾದ ವಸಿಷ್ಠನು ಈ ಕೆಲಸಕ್ಕೆ ಒಪ್ಪಿ ಕೈಹಾಕಲಿಲ್ಲ. ಇಂತಹ ಕೆಲಸಕ್ಕೆ ಕ್ಷತ್ರಿಯನು ಮುಂದುವರಿದು ಸಶರೀರನಾಗಿ ಅವನನ್ನು ಸ್ವರ್ಗಕ್ಕೆ ಕಳುಹಿಸುವನು, ಎಂದು ಅವರೆಲ್ಲರೂ ಉಪಹಾಸ ಮಾಡಿದರು. ಇದಕ್ಕಿಂತಲೂ ಉಪಹಾಸಕರವಾದ ಮಾತುಗಳನ್ನು ಕೇಳಿಯೇ ಇಲ್ಲ.

ವಿಶ್ವಾ—ಋಷಿಗಳೇ! ವಸಿಷ್ಠನ ನೂರುಜನ ಮಕ್ಕಳೂ ಹೀಗೆಯೇ ಅಭಿಪ್ರಾಯ ಪಡುವರೇನು?

ಋಷಿ—ಹೌದು.

ವಿಶ್ವಾ—ಹಾಗಾದರೆ ಕೇಳಿ. ತ್ರಿಶಂಕುವನ್ನು ಚಂಡಾ ಲನೆಂದು ಭಾವಿಸಿ ಈ ಯಜ್ಞವನ್ನು ಹೀಯಾಳಿಸು ವವರೇ ಅಶುಚಿಯಾದ ರಾಕ್ಷಸನಿಂದ ಮೃತ್ಯುವನ್ನೈ

ದುವರು. ನಾನು ಕ್ಷತ್ರಿಯನೆಂದು ನನ್ನನ್ನು ನಿರಾಕರಿಸುವವರಿಗೆ ಶಾಸ್ತ್ರ ಪರಿಚಯವಿಲ್ಲ. ಆದರಿಂದಲೇ ಅವರಿಗಿಂತಹಬುದ್ಧಿ. ನನ್ನಂತೆ ಯಾರು ತಪಸ್ಸನ್ನು ಮಾಡುವರೋ ಅವರು ಋಷಿತ್ವವನ್ನು ಪಡೆಯುವರು. ಬ್ರಹ್ಮರ್ಷಿತ್ವವನ್ನು ಬ್ರಹ್ಮನು ತಾನಾಗಿಯೇ ಬಂದು ಕೊಟ್ಟು ಹೋಗುವನು. ಮೊದಲು ಯಜ್ಞವನ್ನು ಪೂರ್ಣಮಾಡುವೆನು. ಉಚ್ಚಾಭಿಪ್ರಾಯವುಳ್ಳವರು ಉತ್ತೇಜಿತ ಬ್ರಹ್ಮತ್ವವನ್ನು ಹೊಂದುವರು. ಕ್ಷತ್ರಿಯ, ವೈಶ್ಯ, ಶೂದ್ರ, ಚಂಡಾಲನೆಂಬ ಭೇದಭಾವನೆಯಿಲ್ಲ. ತಪಸ್ಸಿನಿಂದ ಬ್ರಹ್ಮತ್ವವು ಲಭಿಸುವುದು. ಈ ತತ್ವದ ಆದರ್ಶ (Ideal) ವನ್ನು ಸಂಸಾರ ಪ್ರಪಂಚದ ಮುಂದಿಡುವೆನು. ನಾರಾಯಣನೇ ಸ್ವಯಂ ಮಾನವರೂಪದಲ್ಲಿ ಅವತರಿಸುವನೆಂಬುದು ನಮ್ಮ ಜನಸಾಮಾನ್ಯಕ್ಕೇ ಸನ್ಮಾನ ಕಾರಣವಲ್ಲವೆ? ಸಂಸಾರವೆ! ನೋಡು ಆಚಾರವೇ ಜಾತಿಗೆ ಮೂಲ. ಆಚಾರ ಭ್ರಷ್ಟನಾದರೆ ಬ್ರಾಹ್ಮಣರೂ ಚಂಡಾಲನಾಗುವನು. ಸದಾಚಾರಿಯಾದ ಶಬರ (ಬೇಡನೂ) ಬ್ರಾಹ್ಮಣ. ಇಲ್ಲದಸಲ್ಲದ ವ್ಯಾಖ್ಯಾನಗಳಿಂದ ಶಾಸ್ತ್ರಧರ್ಮವು ಹಾಳಾಗಿದೆ. ನೈಜವಾದ ಶಾಸ್ತ್ರಧರ್ಮವನ್ನು ಭೂಮಂಡಲದಲ್ಲೆಲ್ಲಾ ಹರಡುವೆನು. ಯಾರಿಗೆ ವಂಶಾಭಿಮಾನವು ಇಲ್ಲವೋ ಅವರ ತಪಃ ಪ್ರಭಾವವು ಮೂರು ಲೋಕದಲ್ಲಿಯೂ ಪಸರಿಸುವುದು.

(ವಿಶ್ವಾಮಿತ್ರ, ಋಷಿಗಳು ಹೋಗುವರು.)

## ದಾರಿ.

(ಸದಾನಂದ ಮತ್ತು ಬ್ರಾಹ್ಮಣರು.)

ಮೊದಲನೆಯ ಬ್ರಾಹ್ಮಣ—ನಡೆ. ನಡೆ. ಇನ್ನು ಬ್ರಾಹ್ಮಣ್ಯದಿಂದೇನೂ ಪ್ರಯೋಜನವಿಲ್ಲ. ಯಜ್ಞಕ್ಕೆ ಹೋಗೋಣ ನಡೆ. ವಸಿಷ್ಠರ ಮಕ್ಕಳಂತೆ ಶಾಪಕ್ಕೆ ಗುರಿಯಾಗಬೇಕೇನು?

ಸದಾ—ಅದೇನೋ ನಿಜ. ಅಯ್ಯಾ! "ವೃಷ್ಟ್ಯಾನ್ನಮಿತರೇಜನಾಃ" ನಾವು ಹೋಗಿ ಒಂದು ಹೊತ್ತು ಹೊಟ್ಟೆತುಂಬ ಊಟಮಾಡಿ ಬರೋಣ. ನಡೆ.

ಎರಡನೆಯಬ್ರಾಹ್ಮಣ—ನಡೆ. ಜಾತಿ, ಗೀತಿ, ಕುಲ. ಯಾವುದೂ ಉಳಿಯುವ ಹಾಗಿಲ್ಲ. ನಡೆಯಯ್ಯಾ.

ಮೊದಲನೆಯವನು-ಇದೇಕಯ್ಯಾ ಯೋಚಿಸುತ್ತೀಯೆ? ಯಾವ ಯಜ್ಞದಲ್ಲಿ ವಿಶ್ವಾಮಿತ್ರನು ಪುರೋಹಿತನೋ ಆ ಯಜ್ಞದಲ್ಲಿ ಬ್ರಹ್ಮನೇ ಸ್ವಯಬಂದು ಹವಿಸ್ಸನ್ನು ಗ್ರಹಣಮಾಡುವನು.

ಎರಡನೆಯವನು—ಬ್ರಹ್ಮನೇ ಸ್ವಯಂ ಹವಿಸ್ಸನ್ನು ತೆಗೆದುಕೊಳ್ಳಲಿ. ಆದಮಾತ್ರಕ್ಕೆ ಚಂಡಾಲನ ಅನ್ನವನ್ನು ತಿನ್ನಬೇಕೇನು?

ಸದಾ—ವೃಷ್ಟ್ಯಾನ್ನವು ಅಶುದ್ಧವಾಗುವುದಿಲ್ಲ. ನಮ್ಮ ದೇಹದಲ್ಲೀ ನಾರಾಯಣನಿದ್ದಾನೆ. ಅವನು ಎಲ್ಲವನ್ನೂ ಶುದ್ಧಮಾಡುವನು.

(ಒಬ್ಬ ವೃದ್ಧ ಬ್ರಾಹ್ಮಣನ ಪ್ರವೇಶ.)

ವೃದ್ಧ—ನೀವೇಕೆ ಇಲ್ಲಿಲ್ಲಿಯೇ ಸುತ್ತುತ್ತಿರುವಿರಿ? ವಿಶ್ವಾಮಿತ್ರನು ಸಾಮಾನ್ಯ ಕ್ಷತ್ರಿಯನೆಂದು ತಿಳಿದಿರುವಿರೇನು? ಇವನು ಕ್ಷತ್ರಿಯ ವಂಶದಲ್ಲಿ ಹುಟ್ಟಿದ್ದರೂ ಇವನು ಗರ್ಭದಿಂದಲೂ ಬ್ರಾಹ್ಮಣನೇ.

ಎರಡನೆಯವನು—(ಸ್ವಗತ) ಮುದುಕರಾದರೆ ದುರಾಸೆಯು ಹೆಚ್ಚಿ ಹೋಗುವುದು. ಇಷ್ಟು ದಿನಗಳವರೆಗೂ ಇವನ ಮನೆಗೆ ಊಟಕ್ಕೆ ಹೋಗುವುದಿಲ್ಲ. ಅವನ ಮನೆ ಅನ್ನ ತಿನ್ನಬಾರದು, ಪರಾನ್ನ ವಸ್ತು ಬಿಟ್ಟು ಬಿಡಬೇಕು, ಎಂದು ಗಡಿಬಿಡಿ ಮಾಡುತ್ತಿದ್ದು, ಈಗ ಹಲವು ಬಗೆಯ ಮೃಷ್ಟಾನ್ನದ ಆಶೆಗೋಸ್ಕರ ವಿಶ್ವಾಮಿತ್ರನನ್ನು ಕ್ಷತ್ರಿಯನ ವಂಶದಿಂದ ಬ್ರಾಹ್ಮಣ ವಂಶಕ್ಕೆ ವರ್ಗಾಯಿಸಿರುವನು. (ಪ್ರಕಾಶ) ಕ್ಷತ್ರಿಯರ ಹೊಟ್ಟೆಯಲ್ಲಿ ಬ್ರಾಹ್ಮಣನು ಹುಟ್ಟಿದುದು ಹೇಗೆ? ಅಪ್ಪಣೆ ಕೊಡಿಸಬೇಕು.

ಸದಾ—ಹೌದು ಹೌದು. ಇದಕ್ಕೆ ವಚನವಿದೆ. ನಾವು ಪಾಠಶಾಲೆಯಲ್ಲಿ ಓದಿದ್ದೆವು.

ಎರಡನೆಯವ—ಏನು ವಚನವಿದೆ? ಹೇಳು, ಸುಳ್ಳನ್ನು ಏಕೆ ಹೇಳಬೇಕು?

ಸದಾ—ನನ್ನದೋ ಆ ಬ್ರಾಹ್ಮಣನದೋ ಅನ್ಯಾಯ? ಬ್ರಾಹ್ಮಣಭೋಜನವನ್ನು ತಪ್ಪಿಸಿ ವ್ಯರ್ಥಮಾಡಬೇಕೆಂದು ಕುಳಿತಿರುವನಲ್ಲಾ?

ಎರಡನೆಯುವ—ಯಾವ ಬ್ರಾಹ್ಮಣನ ಭೋಜನ? ಚಂಡಾಲನ ಅನ್ನವನ್ನು ಗ್ರಹಣಮಾಡಲಾರೆ.

ಸದಾ—ಸ್ವರ್ಣಪಾತ್ರದಲ್ಲಿ ದೋಷವಿಲ್ಲ. ಇಲ್ಲ. ಸ್ವರ್ಣಪಾತ್ರದಲ್ಲಿ•ದೋಷವಿಲ್ಲ. ಗ್ರಂಥವನ್ನು ಇಲ್ಲಿಗೆ ತರಲಿಲ್ಲ. ತಂದಿದ್ದರೆ ವಚನವನ್ನ ತೋರಿಸುತ್ತಿದ್ದೆ. (ವೃದ್ಧಬ್ರಾಹ್ಮಣನಕಡೆಗೆ ತಿರುಗಿ) ನಮ್ಮ ಹಿರಿಯರಾದ ಇವರು ಅಪ್ಪಣೆ ಕೊಡಿಸುವರು.

ಎರಡನೆಯುವ—(ವೃದ್ಧನನ್ನು ಕುರಿತು) ಇವನು ನಿಮ್ಮ ಮೊಮ್ಮಗನೇನು ?

ಸದಾ—ಹದಿನಾರಾಣೆ ಮೊಮ್ಮಗನೇ! ಇವರು ಫಲಹಾರದ ವಿಧಿಯನ್ನು ಹೇಳುವಾಗ ನಾನು ಇವರ ಮೊಮ್ಮಗನ ಮೊಮ್ಮಗ.

ವೃದ್ಧ—ಕೇಳಿ. ನಾನು ಸುಳ್ಳನ್ನು ಹೇಳಲಿಲ್ಲ. ನೀವು ಸಂದೇಹ ಪಡಬೇಡಿ. ವಿಶ್ವಾಮಿತ್ರನ ತಂದೆಯಾದ ಗಾಧಿರಾಜನಿಗೊಬ್ಬಳು ಮಗಳಿದ್ದಳು. ಅವಳು ಋಚೀಕ ಋಷಿಯನ್ನು ಮದುವೆಯಾಗಿದ್ದಳು. ತನ್ನ ಪತ್ನಿಯ ಅನುರೋಧಕ್ಕೊಳಪಟ್ಟು ಗಾಧಿರಾಜನ ರಾಣಿಗೂ ತನ್ನ ಪತ್ನಿಗೂ ಎರಡು ಪುತ್ರಪ್ರಾಪ್ತಿಯಾಗಬೇಕೆಂದು ಎರಡು ವಿಧವಾದ ಚರು (ಹವಿಸ್ಸು) ಗಳನ್ನು ಸಿದ್ಧಮಾಡಿದನು. ತನ್ನ ಪತ್ನಿಗೆ ಕೊಡಬೇಕೆಂದಿದ್ದ ಚರುವು ಬ್ರಹ್ಮತೇಜಸ್ಸಿನಿಂದ ಪೂರ್ಣವಾಗಿದ್ದಿತು. ಇನ್ನೊಂದು ಚರುವು ಕ್ಷತ್ರಿಯ ತೇಜಃ

ಪೂರ್ಣವಾಗಿದ್ದಿತು. ತಾಯಿಯ ಅನುರೋಧಕ್ಕೊಪ್ಪಿ ತನ್ನ ಚರುವನ್ನು ತಾಯಿಗೆ ಕೊಟ್ಟು ತಾಯಿಯ ಚರುವನ್ನು ತಾನು ಗ್ರಹಣಮಾಡಿದಳು. ಆ ಬ್ರಹ್ಮ ತೇಜಃಪೂರ್ಣವಾದ ಚರುವಿನ ಪ್ರಭಾವದಿಂದ ಗಾಧಿ ರಾಜನ ರಾಣಿಯ ಗರ್ಭದಲ್ಲಿ ಬ್ರಹ್ಮತೇಜ ಸಂಪನ್ನ ನಾದ ಪುತ್ರನುದಯಿಸಿದನು. ಅವನೇ ವಿಶ್ವಾಮಿತ್ರ !

ಎರಡನೆಯವ—ಆದರೆ ಋಚೀಕನಿಗೆ ಕ್ಷತ್ರಿಯನಾದ ಮಗನಾಗಲಿಲ್ಲವೇಕೆ ?

ಸದಾನಂದ—ಹೌದು ಹೌದು. ಅದು ನನಗೆ ಗೊತ್ತು. ಅವನು ದಿಗ್ವಿಜಯಕ್ಕೆ ಹೋಗಿದ್ದಾನೆ.

ಎರಡನೆಯ—(ಸದಾನಂದನನ್ನು ಕುರಿತು) ಇದಕ್ಕೆ ನಿನ್ನ ವಚನವಿದೆಯಲ್ಲವೆ ?

ಸದಾ—ವಚನವಿಲ್ಲವೆ ? ಫಲಾಹಾರ ತಂತ್ರದ ಮೊದ ಲನೆಯ ಅಧ್ಯಾಯದಲ್ಲಿಯೇ ಬರೆದಿದೆ.

ಎರಡನೆಯವ—ಏನು ಬರೆದಿದೆ ?

ಸದಾ—ಮೊದಲನೆಯ ಶ್ಲೋಕದಿಂದಲೇ ಆರಂಭ— ನಿಮ್ಮ ತಾತಂದಿರಿಗೆ ಗೊತ್ತು. ಅವರನ್ನು ಕೇಳು.

ವೃದ್ಧ—ಅಣ್ಣಾ ! ಯೋಚಿಸಬೇಡ. ಫಲಾಹಾರ ಅಷ್ಟೇ ನೂ ಚೆನ್ನಾಗುವುದಿಲ್ಲ.

ಸದಾ—(ಎರಡನೆಯವನನ್ನು ಕುರಿತು) ನೋಡು. ಈಗ ಲೂ ಗೊತ್ತಾಗುವುದಿಲ್ಲವೆಂದರೆ ಕೈಕೈಸೇರಬೇಕಾ ಗುತ್ತೆ.

ವೃದ್ಧ—ಸಂದೇಹ ಪಡಬೇಡಿ. ಋಚೀಕನಿಗೆ ಮಹಾ ಕ್ಷತ್ರಿಯ ತೇಜಸ್ಸಂಪನ್ನನಾದ ಮೊಮ್ಮಗನು ಹುಟ್ಟಿರುವನು. ಕ್ಷತ್ರಿಯ ಕುಲವನ್ನೇ ನಾಶಮಾಡಬೇಕೆಂದು ಸ್ವಯಂ ನಾರಾಯಣನು ಪರಶುರಾಮನ ರೂಪದಿಂದ ಹುಟ್ಟಿರುವನು.

ಎರಡನೆಯ—ಚರುವನ್ನು ತಿಂದವಳು ಅತ್ತೆ! ಗರ್ಭವನ್ನು ಧರಿಸಿದವಳು ಸೊಸೆ! ಕ್ಷತ್ರಿಯ ತೇಜಸ್ಸಿನಿಂದ ಒಬ್ಬ ಪುರುಷನು ಅವತರಿಸಿದನಂತೆ!

ಸದಾ—ಹೌದು ಹೌದು. ಹಾಗೆ ಅವತರಿಸುತ್ತಾರೆ. ನಾನು ಐದು ಮಂದಿ (ಪಂಚಪುರುಷರ) ತೇಜಸ್ಸಿನಿಂದ ಹುಟ್ಟಿ ಬಂದಿರುವೆನು!

ವೃದ್ಧ—ಕೇಳಿ. ನಾನು ಮುಂದೆ ನಡೆದದ್ದನ್ನು ಹೇಳುವೆನು. ತನ್ನ ಪತ್ನಿಯು ತಾಯಿಯ ಅನುರೋಧದಿಂದ ಚರುವನ್ನು ಬದಲಾಯಿಸಿದಳೆಂದು ತಿಳಿದಾಗ ಆ ಋಚೀಕ ಮಹರ್ಷಿಯು ಪತ್ನಿಯನ್ನು ಕುರಿತು “ನಿನಗೆ ಕ್ಷತ್ರಿಯ ಸಂತಾನವಾಗುವುದು” ಎಂದು ಹೇಳಿದನು. ಪತ್ನಿಯು ಪುನಃ ಪುನಃ ಬೇಡಿಕೊಂಡಿದ್ದರ ಮೇಲೆ ಅವಳು ತಿಂದ ಚರುವಿನ ಪ್ರಭಾವವು ಅವಳ ಮೊಮ್ಮಗನಲ್ಲಿ ಪ್ರಕಾಶವಾಗುವಂತೆ ವರವನ್ನು ಕೊಟ್ಟನು.

ಮೂರನೆಯವ—ಒಳ್ಳೆಯದು. ನೀವು ಹೇಳಿದುದೆಲ್ಲಾ ಸರಿಯೆ? ಚರು ಎಂದರೇನು? ಈ ಚರುವನ್ನು ತಿನ್ನು

ವುದರಿಂದ ಕ್ಷತ್ರಿಯ ಪುತ್ರನಾಗುವನು. ಬ್ರಾಹ್ಮಣ ಪುತ್ರನಾಪವನು ಎಂದರೇನು? ಹೇಳಿ.

ವೃದ್ಧ—ಚರು ಎಂದರೆ ಮತ್ತೇನೂ ಅಲ್ಲ. ಕೇವಲ ಶುದ್ಧಾನ್ನ. ಇದರಿಂದ ಅಂಗವು ಶುದ್ಧವಾಗುವುದು. ಶುದ್ಧಳೂ ಆಚಾರಶೀಲಳೂ ಆದ ರಮಣಿಗೆ ಚರುವಿನಿಂದ ಪ್ರಯೋಜನವೇನೂ ಇಲ್ಲ. ಅಂತಹ ಭಾಗ್ಯವತಿಯು ತನ್ನ ಶುದ್ಧಾಚಾರಪ್ರಭಾವದಿಂದ ಯೋಗ್ಯನಾದ ಪುತ್ರನನ್ನು ಪಡೆಯುವಳು. ಅವಳ ಪುತ್ರನಿಗೆ ಈ ಸಂಸಾರದಲ್ಲಿ ಅಸಾಧ್ಯವಾದುದು ಯಾವುದೂ ಇಲ್ಲ. ಅಂತಹ ರಮಣಿಯು ಚಂಡಾಳಿಯಾದರೂ ಅವಳ ಹಿಂದಿನ ಆಚಾರಪ್ರಭಾವದಿಂದ ಅವಳ ಗರ್ಭದಲ್ಲಿ ಬಹ್ಮತೇಜಸ್ಸಂಪನ್ನನಾದ ಪುರುಷನೇ ಹುಟ್ಟುವನು. ಶಾಸ್ತ್ರಮರ್ಮವು ಹೀಗಿರುವುದು. ನಡೆಯಿರಿ. ನಾವು ಹೋಗದಿದ್ದರೂ ಯಜ್ಞವು ಪೂರ್ಣವಾಗುವುದು. ಹೋಗದಿದ್ದರೆ ನಾವೇ ದೋಷಭಾಗಿಗಳಾಗುವೆವು.

ಎರಡನೆಯ—ನಡೆಯಿರಿ. ಎಲ್ಲರ ಅಭಿಪ್ರಾಯಕ್ಕೂ ವಿರೋಧವಾಗಿ ನಾನು ನಡೆಯುವುದಿಲ್ಲ.

ಸವಾ—ಆಜ್ಞಾ! ದಾರಿಯಲ್ಲಿ ಬಾ.

ವೃದ್ಧ—ಕೇಳಿರಿ. ವಿಶ್ವಾಮಿತ್ರನ ತಪಃಪ್ರಭಾವದಿಂದ ತಪೋಬಾಲೆಯರು ಮಾನವರಂತೆ ವೇಷವನ್ನುಧರಿಸಿ

ಆನಂದ ಧ್ವನಿಯಿಂದ ಹಾಡುತ್ತಾ ಯಜ್ಞಕ್ಕೆ ಹೋಗುತ್ತಿರುವರು.

(ಎಲ್ಲರೂ ಹೋಗುವರು.)

**ಯಜ್ಞಸ್ಥಳ.**

(ವಿಶ್ವಾಮಿತ್ರ, ಬ್ರಾಹ್ಮಣರು, ಋಷಿಗಳು, ಮತ್ತು ಬದರಿ)

ಬ್ರಾಹ್ಮಣ—ಧನ್ಯ ವಿಶ್ವಾಮಿತ್ರ ! ಧನ್ಯ ! ಈ ಮಾನವ ಶರೀರದೊಡನೆಯೇ ತ್ರಿಶಂಕುವನ್ನು ಸ್ವರ್ಗಕ್ಕೆ ಕಳುಹಿಸಿ ಬಿಟ್ಟನು.

ತ್ರಿಶಂಕು—(ತೆರೆಯಲ್ಲಿ) ರಾಜರ್ಷಿ ! ಕಾಪಾಡು ! ಕಾಪಾಡು ! ಇಂದ್ರನು ನನ್ನನ್ನು ಸ್ವರ್ಗದಿಂದ ಕೆಳಕ್ಕೆ ತಳ್ಳಿಬಿಟ್ಟನು. ಕಾಪಾಡು ! ವಿಶ್ವಾಮಿತ್ರ! ರಕ್ಷಿಸು! ರಕ್ಷಿಸು !

ಎರಡನೆಯ ಬ್ರಾಹ್ಮಣ—(ವೃದ್ಧನನ್ನು ಕುರಿತು) ಈ ನಿನ್ನ ವಿಶ್ವಾಮಿತ್ರನ ಬೂಟಾಟಿಕೆಯು ಗೊತ್ತಾಯಿತಷ್ಟೆ ! ಅಲ್ಲಿ ನೋಡು ! ತಲೆಕೆಳಗಾಗಿ ತ್ರಿಶಂಕುವು ಸ್ವರ್ಗದಿಂದ ಬೀಳುತ್ತಿದ್ದಾನೆ.

ವೃದ್ಧ—ಈಗಲೆ ಅದ್ಭುತವಾದ ರಹಸ್ಯವು ಹೊರಪಡುವುದು. ನೀನೇ ನೋಡುವೆ.

ತ್ರಿಶಂಕು—(ಶೂನ್ಯಪ್ರವೇಶದಿಂದ) ಕಾಪಾಡು !. ಕಾಪಾಡು. ರಾಜರ್ಷಿ ಕಾಪಾಡು.

ವಿಶ್ವಾ—ಅತ್ರೈವ ತಿಷ್ಠ ! (ಅಲ್ಲಿಯೇ ನಿಲ್ಲು.)
(ತ್ರಿಶಂಕುವು ಶೂನ್ಯದೇಶದಲ್ಲಿಯೇ ಇರುವನು.)

ಬದರಿ—ಮಹಾಸ್ವಾಮಿ! ನನ್ನ ಪತಿಯನ್ನು ಅಂತಹ ಶೂನ್ಯಪ್ರದೇಶದಲ್ಲಿ ನಿಲ್ಲಿಸಬೇಡಿ. ಇಳಿಸಿಬಿಡಿ. ಬೇಗ ಇಳಿಸಿಬಿಡಿ. ಅಯ್ಯೋ ನಾನು ನಿನಗೆ ಬೇಡವೆಂದು ಎಷ್ಟೋ ಹೇಳಿದೆ. ಸ್ವರ್ಗಕ್ಕೆ ಹೋಗುವ ಯತ್ನವು ಬೇಡವೆಂದು ನೂರಾರುಬಾರಿ ನಿನ್ನನ್ನು ಕೇಳಿಕೊಂಡೆ. ನೋಡಿದೆಯಾ ? ತಲೆಕೆಳಗಾಗಿ ಶೂನ್ಯ ಪ್ರದೇಶದಲ್ಲಿ ನಿಂತಿರುವೆಯಲ್ಲಾ ?

ವಿಶ್ವಾ—ಇಳಿದುಬಾ. (ತ್ರಿಶಂಕುವು ಇಳಿದು ಬರುವನು.) ನಿನ್ನನ್ನು ಸ್ವರ್ಗಪಥದಿಂದ ಕೆಳಕ್ಕೆ ತಳ್ಳಿದವರು ಯಾರು ?

ತ್ರಿಶಂಕು—ಆ ದೇವರಾಜನಾದ ಇಂದ್ರ. ನಾನು ಸ್ವರ್ಗ ವನ್ನು ಪ್ರವೇಶ ಮಾಡುವುದರೊಳಗಾಗಿ ನನ್ನನ್ನು ಕುರಿತು ಗರ್ಜಿಸ ತೊಡಗಿದನು. ಕಣ್ಣುಗಳು ಕಾಣಿ ಸದೇ ಹೋದವು. ಹತ್ತು ಲೆತ್ತಿಸಿ ಭಯದಿಂದ ಕೆಳಕ್ಕೆ ಬಿದ್ದೆನು.

ವಿಶ್ವಾ—ಒಳ್ಳೆಯದು. ನಾನು ಪುನಃ ಅಗ್ನಿಗೆ ಆಹುತಿ ಯನ್ನು ಕೊಡುವೆನು. ಇಂದ್ರನು ನಿನಗೆ ತೊಂದರೆ ಯನ್ನು ಕೊಟ್ಟಿರುವನು. ನಾನು ನಿನಗೆ ಇಂದ್ರತ್ವ ವನ್ನು ಕೊಡುವೆನು.

ಬದರಿ—ಮಹರ್ಷಿಗಳೇ! ಬೇಡಿ. ತಾಳ್ಮೆಯಿಂದಿರಿ. ನಾನು ಈತನನ್ನು ಮನೆಗೆ ಕೆರೆದು ಕೊಂಡು ಹೋಗು ವೆನು. (ತ್ರಿಶಂಕುವನ್ನು ಕುರಿತು) ಬಾ! ಇನ್ನು ನೀನು ಸ್ವರ್ಗಕ್ಕೆ ಹೋಗಬೇಕಾದ್ದಿಲ್ಲ. ಸ್ವರ್ಗದ ದೇವತೆಗಳಲ್ಲೊಬ್ಬರೂ ನಿನಗೆ ಅಲ್ಲ ಸ್ಥಳವನ್ನು ಕೊಡಲಾರರೆಂದು ನಾನು ಮೊದಲೇ ನಿನಗೆ ಹೇಳಿದ್ದೆನಲ್ಲವೆ? ಏನು? ಈ ಮೂವತ್ತುಮೂರು ಕೋಟಿ ದೇವತೆಗಳ ಮಧ್ಯೆ ಮನುಷ್ಯನೊಬ್ಬನು ಇರಲಾಗುವುದೇ? ಇಲ್ಲಿ ರಾಜನಾಗಿರುವೆ. ಸುಖಿಯಾಗಿರುವೆ. ಅಬ್ಬಬ್ಬಾ ಆ ಶೂನ್ಯಪ್ರದೇಶವನ್ನು ಸ್ಮರಿಸಿಕೊಂಡರೆ ಎದೆಯು ಡವಡವ ಹೊಡೆದುಕೊಳ್ಳುವುದು.

ತ್ರಿಶಂಕು—ಇಲ್ಲ, ನಾನು ಸ್ವರ್ಗಕ್ಕೇ ಹೋಗುವೆನು. ಈಬಾರಿ ನೋಡು. ನಾನು ಇಂದ್ರನಾಗುವೆನು.

ಬದರಿ—ಸ್ವರ್ಗಕ್ಕೆ ಹೋಗುವಾಗಲೇ ಘೋರ ವಿಪತ್ತಿಗೆ ಸಿಕ್ಕಿದ್ದೆ. ದೈವಾಧೀನದಿಂದ ಆದುತಪ್ಪಿತು. ಈ ಬಾರಿ ಇಂದ್ರನಾಗುವುದಾದರೆ ನೀನು ಬದುಕುವುದೇ ಇಲ್ಲ. (ವಿಶ್ವಾಮಿತ್ರನ ಪಾದಗಳಿಗೆರಗಿ) ಮಹರ್ಷಿ! ನಿಮ್ಮ ಕಾಲುಗಳಿಗೆ ಬೀಳುವೆನು. ಈತನಿಗೆ ಇಂದ್ರತ್ವವನ್ನು ಕೊಡಿಸಬೇಡಿ.

ವಿಶ್ವಾ—ಶುಭೆ! ಸ್ಥಿರಳಾಗು. ನಿನ್ನ ಪತಿಯು ಇಂದ್ರನಾಗುವನು. ನೀನು ಇಂದ್ರಾಣಿಯಾಗುವೆ.

ಬದರಿ—ಮಹರ್ಷಿ! ಕ್ಷಮಿಸು. ಕ್ಷಮಿಸು. ನಾವು ಮೃತ

ರಾದಮೇಲೆ ಆಗುವುದು, ಆಗುತ್ತೆ. ನಾನು ಈ ಶರೀರದೊಡನೆ ಸ್ವರ್ಗಕ್ಕೆ ಹೋಗಲಾರೆ.

ತ್ರಿಶಂಕು—ಖಂಡಿತವಾಗಿಯೂ ಹೋಗುವೆ. ನಾನು ನಿನ್ನನ್ನು ಕೈಕಾಲು ಕಟ್ಟಿಹಾಕಿ ತೆಗೆದು ಎತ್ತಿಕೊಂಡು ಹೋಗುವೆನು.

ವಿಶ್ವಾ—ಸ್ಥಿರನಾಗು. (ಆಹುತಿಯನ್ನು ಕೈಯಲ್ಲಿ ಹಿಡಿದುಕೊಂಡು) ಎಲೈ! ಅಗ್ನಿಯೆ! ಸರ್ವಭುಕ್! ಅಗ್ನಯೇಸ್ವಾಹಾ! ಈ ಆಹುತಿಯನ್ನು ಸ್ವೀಕರಿಸು.

ವೃದ್ಧ—ಶಾಂತನಾಗು: ಈ ಬ್ರಹ್ಮ ಸೃಷ್ಟಿಯಲ್ಲಿ ಬ್ರಹ್ಮನಿಗಲ್ಲದೆ ಮತ್ತಾರಿಗೂ ಇಂದ್ರನನ್ನು ಬದಲಾಯಿಸಲು ಶಕ್ತಿಯಿಲ್ಲ.

ವಿಶ್ವಾ—ಅಯ್ಯಾ ಬ್ರಾಹ್ಮಣ! ನಿಜವನ್ನೇ ಹೇಳಿದೆ. ಆದರೆ ನನ್ನ ಮಾತು ಸುಳ್ಳಾಗುವುದಿಲ್ಲ. ನಾನು ಹೊಸ ಸೃಷ್ಟಿಯನ್ನು ಮಾಡುವೆನು. ಬ್ರಹ್ಮಸೃಷ್ಟಿಗಿಂತಲೂ ಶ್ರೇಷ್ಠವಾದ ಸೃಷ್ಟಿ! ವಸುಂಧರೆ! ನಾನು ಕೊಡುವ ಆಹುತಿಯನ್ನು ಸ್ವೀಕರಿಸು. ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ತರು, ಲತೆ, ಫಲ, ಪುಷ್ಪಗಳಿಗಿಂತ ಮನುಷ್ಯ ಸುಲಭವೂ ಸುಂದರವೂ ಆದ ಫಲಪುಷ್ಪ ಶೋಭಿತವಾದ ವೃಕ್ಷಲತೆಗಳನ್ನು ಕೂಡಲೆ ನಿನ್ನ ವಕ್ಷದಲ್ಲಿ ಧರಿಸು. ಸ್ವಾಹಾ! (ಆಹುತಿಯನ್ನು ಕೊಡುವನು. ಕೂಡಲೆ ಹೋಮಕುಂಡದಿಂದ ಖರ್ಜೂರ ವೃಕ್ಷವು ಏಳುವುದು) ವೃಕ್ಷವೆ! ಖರ್ಜೂರ ವೃಕ್ಷ

ವೆಂಬ ಹೆಸರನ್ನು ಹೊಂದು. ಬಹು ರುಚಿಯಾದ ಫಲಗಳನ್ನು ಹೊಂದು. ನಿನ್ನ ದೈಹಿಕ ರಸಪ್ರಸ್ತುತ ವಾದ ನಿನ್ನ ಸಕ್ಕರೆಯು ಸಿಹಿಯು ಕಬ್ಬಿನ ರಸದಿಂದ ಆದ ಸಕ್ಕರೆಯ ಸಿಹಿಗಿಂತ ಉತ್ಕೃಷ್ಟವಾದದ್ದಾಗಲಿ! ಸ್ವಾಹಾ! ಚಂದ್ರ (ಬಾಳೆಯ ಗಿಡವು ಏಳು ವುದು) ರಂಭಾವೃಕ್ಷವೆ! ನೀನು ಬ್ರಹ್ಮನಿಂದ ಸೃಷ್ಟಿ ಸಲ್ಪಟ್ಟ ರಂಭಾವೃಕ್ಷಕ್ಕಿಂತ ಹೆಚ್ಚಾದ ಫಲವನ್ನು ಧರಿಸು. ಚಂದ್ರಬಾಳೆ ಎಂಬ ಹೆಸರನ್ನು ಹೊಂದು. ಚಂದ್ರ ದ್ವೀಪದ ಕೀರ್ತಿಯನ್ನು ಹೆಚ್ಚಿಸು! ಸ್ವಾಹಾ (ಶೇಬಿನ ಮರದಉತ್ಥಾನ) ಮರವೆ! ನಿನ್ನ ಜಾತಿಯ ಹಣ್ಣುಗಳಲ್ಲೆಲ್ಲಾ ಶ್ರೇಷ್ಠವಾಗಿಯೂ ಸುಂದರವಾ ಗಿಯೂ ರುಚಿಯಾಗಿಯೂ ಇರುವ ಹಣ್ಣುಗಳನ್ನು ಧರಿಸು. ಜನಸಮಾಜದಲ್ಲಿ ಬಹು ಉಪಕಾರಿಯಾಗು! ಸ್ವಾಹಾ! (ಕುಂಬಳಕಾಯಿ ಏಳುವುದು) ಎಲೈ ಕೂಷ್ಮಾಂಡದ ಲತೆಯೆ! ನಿನ್ನ ಕಾಯಿ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ಕೂಷ್ಮಾಂಡಕ್ಕಿಂತ ಸುಂದರವೂ ರುಚಿ ಕರವೂ ದೊಡ್ಡದೂ ಆಗಲಿ. ಸ್ವಾಹಾ! (ಈರುಳ್ಳಿಯ ಗಿಡ ಏಳುವದು) ಈರುಳ್ಳಿಯೆ! ನೀನು ಬೆಳ್ಳುಳ್ಳಿ ಗಿಂತ ಹೆಚ್ಚಾಗಿ ಜನಪ್ರಿಯವಾಗು! ಸ್ವಾಹಾ! (ನಾನಾ ವಿಧವಾದ ಫಲಪುಷ್ಪಗಳು ಏಳುವುದು) ಹಲವು ದೇಶಗಳಲ್ಲಿ ಹಲವು ಹೆಸರುಗಳಿಂದ ಮನುಷ್ಯ ರಲ್ಲಿ ಪ್ರಸಿದ್ಧಿಯನ್ನು ಹೊಂದು. ಸ್ವಾಹಾ! (ಉದ್ದಿನ ಗಿಡ ಏಳುವುದು) ನೀನು ಮಾಷವೆಂಬ ಹೆಸರಿನಿಂದ

ಪ್ರಸಿದ್ಧಿಯನ್ನು ಹೊಂದಿ ನಿನ್ನ ಬೀಜವು ಮಾಂಸಕ್ಕಿಂತಲೂ ಹೆಚ್ಚು ಸತ್ವವುಳ್ಳದ್ದಾಗಲಿ. ಸ್ವಾಹಾ! (ರಾಗಿಯ ಗಿಡವು ಏಳುವುದು) ನೀನು ರಾಗಿ ಎಂಬ ಹೆಸರಿನಿಂದ ಪರಿಚಯವನ್ನು ಹೊಂದು. ನಿನ್ನ ಬೀಜವು ಬಹಳ ಬಲಕಾರಿಯಾದದ್ದಾಗಲಿ.

ಎರಡನೆಯವ—ರಾಜರ್ಷಿಯೆ! ತರುಲತೆಗಳನ್ನು ಸೃಷ್ಟಿಸಿದೆ. ಆದರೆ ಪೃಥ್ವಿಗೆ ಅಧೀಶ್ವರನಾದ ಮಾನವನ ಸೃಷ್ಟಿಯು ಬ್ರಹ್ಮನದೋ?

ವಿಶ್ವಾ—ಇಲ್ಲ, ಹಾಗಲ್ಲ. ಭೂಮಿಯು ನನ್ನಿಂದ ಸೃಷ್ಟಿಸಲ್ಪಡುವ ಮನುಷ್ಯರ ಅಧೀನವೇ ಆಗುವಳು. ನಾನು ವೃಕ್ಷಗಳಿಂದಲೇ ಮನುಷ್ಯರನ್ನೂ ಸೃಷ್ಟಿಸುವೆನು. ಇನ್ನು ಮನುಷ್ಯನು ಗರ್ಭವಾಸದ ಯಾತನೆಯನ್ನು ಅನುಭವಿಸಬೇಕಾದ್ದಿಲ್ಲ. ಒಂದೇ ನಿಮಿಷದಲ್ಲಿ ನೂರಾರು ಮಂದಿ ಮಕ್ಕಳು ಹುಟ್ಟುವರು. ಸ್ವಾಹಾ! (ತೆಂಗಿನ ಮರವು ಏಳುವುದು) ಮರವೆ! ನಾರಿಕೇಳವೆಂಬ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದು. ಏಕಕಾಲದಲ್ಲಿ ಬಹು ಫಲಗಳನ್ನು ಕೊಡು. ನಿನ್ನ ಫಲದಿಂದ ಮಾನವ-ಮಾನವಿಯರು ಸೃಷ್ಟಿ....

(ಬ್ರಹ್ಮನ ಪ್ರವೇಶ)

ಬ್ರಹ್ಮ—ವಿಶ್ವಾಮಿತ್ರ! ತಾಳು! ಶಾಂತನಾಗು! ನಾನು ಲೋಕಪಿತಾಮಹ. ಮನಸ್ಸಿಟ್ಟರೆ ತ್ರಿಶಂಕುವು ಸ್ವರ್ಗದಲ್ಲಿ ಸ್ಥಾನವನ್ನು ಹೊಂದುವನು.

ವಿಶ್ವಾ—ಪ್ರಭು! ನಾನು ಇಂದ್ರನ ದುರಹಂಕಾರವನ್ನು ಮುರಿಯಲೆತ್ನಿಸಿರುವೆನು. ನಾನು ತ್ರಿಶಂಕುವಿಗೆ ಇಂದ್ರತ್ವವನ್ನು ಕೊಡುವೆನು.

ಬ್ರಹ್ಮ—ವತ್ಸ! ನಿನ್ನ ತಪೋಬಲದಿಂದ ಯಾವ ಕಾರ್ಯವೂ ಅಸಾಧ್ಯವಲ್ಲ. ಆದರೆ ನನ್ನ ಮಾತಿಗೆ ಕಿವಿಗೊಡು. ಕಲ್ಪ ನಿಯಮವನ್ನು ಒಡಲಾಯಿಸಲೆತ್ನಿಸಬೇಡ. ಈ ಕಲ್ಪದಲ್ಲಿ ಇಂದ್ರನಾದವನು ಇನ್ನೊಂದು ಕಲ್ಪದವರೆಗೂ ಇಂದ್ರನಾಗಿಯೇ ಇರುವನು.

(ಬ್ರಹ್ಮನ ಅಂತರ್ಧಾನ)

ವಿಶ್ವಾ—ಪ್ರಭು! ನಿನ್ನ ಮಾತನ್ನು ಮೀರಲಾರೆ. ಮೀರುವುದಿಲ್ಲ. ಆದರೆ ನನ್ನ ಸಂಕಲ್ಪವು ನಿಷ್ಫಲವಾಗುವುದಿಲ್ಲ. ಮಹಾರಾಜ ತ್ರಿಶಂಕು! ನನ್ನ ಹಿಂದೆ ಬಾ! ನಾನು ಹೊಸ ಸ್ವರ್ಗವನ್ನು ಸೃಷ್ಟಿ ಮಾಡುವೆನು. ನೀನು ಆ ಸ್ವರ್ಗದಲ್ಲಿ ಸಶರೀರದಿಂದಲೇ ಇಂದ್ರತ್ವವನ್ನು ಹೊಂದುವೆ.

ತ್ರಿಶಂಕು—ರಾಜರ್ಷಿ! ಆಗಲಿ. ನಾನು ಪುನಃ ತಲೆಕೆಳಗಾಗಿ ಶೂನ್ಯ ಪ್ರದೇಶದಲ್ಲಿ ನಿಲ್ಲಬೇಕಾದ್ದಿಲ್ಲವಷ್ಟೆ?

ವಿಶ್ವಾ—ಯಾವ ಭಯವೂ ಇಲ್ಲ. ನೀನು ನಿನ್ನ ಪತ್ನಿಯೊಡಗೂಡಿ ಬಾ.

(ವಿಶ್ವಾಮಿತ್ರನು ಹೋಗುವನು)

ತ್ರಿಶಂಕು—ಬಾ, ರಾಣಿ! ಬಾ ಶಚಿಯಾಗುವೆ.

ಬಪರಿ— ಇಲ್ಲ, ಇಲ್ಲ. ನಿನಗೆ ಆ ಸ್ವರ್ಗದ ಆಶೆಬೇಡ. ಬಾ, ಮನೆಗೆ ಬಾ !

(ತ್ರಿಶಂಕುವನ್ನು ಕರೆದುಕೊಂಡು ಹೋಗಲೆತ್ನಿಸುವಳು)

ತ್ರಿಶಂಕು--ಬಿಟ್ಟುಬಿಡು, ನನ್ನನ್ನು ಬಿಡು. ನೀನು ಬರ ದಿದ್ದರೆ ಬೇಡ.

ಬಪರಿ—ಬೇಡಬೇಡ. ಮನೆಗೆ ಬಾ.

(ತ್ರಿಶಂಕು, ಬಪರಿ ಹೋಗುವರು)

ಎರಡನೆಯವ—ವಿಶ್ವಾಮಿತ್ರನು ಎಂತಹ ಸೃಷ್ಟಿಮಾಡಿದ! ಗಾಧಿಯ ಮಗನಾದರೆ, ಇವನು ಬ್ರಹ್ಮನಲ್ಲವೇ ? ಸ್ವರ್ಗವನ್ನೇ ಸೃಷ್ಟಿಮಾಡುವನು--ಏನು ಹೇಳೋಣ.

(ಎಲ್ಲರೂ ಹೋಗುವರು)

## ಉತ್ತರ ಮೇರು.

ಬ್ರಹ್ಮಾ ಮತ್ತು ಇಂದ್ರ

ಬ್ರಹ್ಮ—ಹೇಳು ! ದೇವೇಂದ್ರ! ಖಿನ್ನನಾಗಿರುವೆಯೇಕೆ? ದೇವಲೋಕವನ್ನು ಬಿಟ್ಟು ಈ ನಿರ್ಜನಸ್ಥಾನಕ್ಕೆ ಬಂದೆಯೇಕೆ? ದೇವತೆಗಳೆಲ್ಲರೂ ನಿನ್ನ ನಡತೆಯಿಂದ ದುಃಖಿತರಾಗಿ ನನ್ನಲ್ಲಿ ನಿನ್ನ ಸ್ಥಿತಿಯನ್ನು ಹೇಳಿ ಕೊಂಡರು.

ಇಂದ್ರ—ದೇವ! ಇಂದ್ರಪದವಿಯ ಮಾಹಾತ್ಮ್ಯವೇ ನೆಂಬುದನ್ನರಿಯೆ. ಬ್ರಹ್ಮಶಾಪದಿಂದ ಚಂಡಾಲನಾ ದವನಿಗೋಸ್ಕರ ನವೀನ ಸ್ವರ್ಗಲೋಕವು ಸೃಷ್ಟಿಯಾ

ಯಿತು. ಅವನಿಗೆ ಆ ಸ್ವರ್ಗ ಲೋಕದಲ್ಲಿ ಇಂದ್ರ ಪದವಿಯೂ ದೊರಕಿತು. ಈ ವಾರ್ತೆಯು ಅಸಂಭವ ವೆಂದಿದ್ದೆನು. ವಿಶ್ವಾಮಿತ್ರನು ತಪೋಬಲದಿಂದ ರಾಜರ್ಷಿಯಾಗಿ ಸುಂದರವಾದ ಸ್ವರ್ಗವನ್ನು ಸೃಷ್ಟಿಸಿರುವನು. ಮರಗಳಿಂದ ಮಾನವರನ್ನು ಸೃಷ್ಟಿಸುವುದರಲ್ಲಿದ್ದನು. ಎಂತಹ ಅಹಂಕಾರ! ಎಷ್ಟು ಜಂಭ! ತಾವು ನಿವಾರಣೆ ಮಾಡಿದುದಕ್ಕಾಗಿ ಚಿರಕೃತಜ್ಞನಾಗಿರುವೆನು. ತಾವು ಸೃಷ್ಟಿಸಿದ ಸುಮಧುರವಾದ ಫಲಗಳು, ಸುಗಂಧ ಕುಸುಮಗಳು, ಸುಂದರವಾದ ಲತೆಗಳು ಇವೆಲ್ಲವೂ ಮನುಷ್ಯರಿಗೆ ತುಚ್ಛವಾಗಿ ಕಾಣುತ್ತಿವೆ. ದೇವ! ನೀನು ಯಾವಾಗಲೂ ತಪಸ್ಸಿನಿಂದ ಸಂತುಷ್ಟನಾಗುವೆ. ಕೇಳಿದ ವರಗಳನ್ನೆಲ್ಲಾ ತಪಸ್ಸಿಗೆ ಕೊಡುವೆ. ಸ್ವರ್ಗದ ಅಧಿಕಾರದಿಂದ ನನ್ನನ್ನು ಬಿಡುಗಡೆ ಮಾಡು. ತಪಸ್ಸಿನಿಂದ ನಿನ್ನನ್ನು ಸಂತೋಷಪಡಿಸುವೆನು. ನಾನೆಲ್ಲಿಗೆ ಹೋದರೂ ನನ್ನ ಅಪಮಾನವು ತಪ್ಪುವ ಹಾಗಿಲ್ಲ. ಪದೇ ಪದೇ ಅಪಮಾನವಾಗುವುದನ್ನು ತಪ್ಪಿಸಿಕೊಂಡು ನಿರಂತರ ಶಾಂತಿಯಲ್ಲಿ ಮಗ್ನನಾಗುವೆನು. ಸ್ವರ್ಗಾಧಿಪತ್ಯದಿಂದ ನನ್ನನ್ನು ಕಾಪಾಡು.

ಬ್ರಹ್ಮ—ಪುರಂದರ! ನೀನು ವ್ಯಥೆಪಡಬೇಡ. ತಪೋಬಲವಿಲ್ಲದಿದ್ದರೆ ಮೂರು ಲೋಕಗಳು ಯಾವ ಶಕ್ತಿಯ ಪ್ರಭಾವದಿಂದ ಹುಟ್ಟುವುವು? ಇಂದ್ರ ಪದವಿಯು ಹೇಗೆ ತಾನೇ ಲಭಿಸೀತು? ಮಹಾಶಕ್ತಿಯ

ನ್ನು ಆರಾಧಿಸು. ನಿನ್ನ ಇಷ್ಟಾರ್ಥವೆಲ್ಲವೂ ಈಡೇರು ವುವು. ಮಹಾಶಕ್ತಿಯು ಪೂಜೆಗೇ ತಪಸ್ಸೆಂದು ಹೆಸರು. ಆ ತಪೋಬಲದಿಂದಲೇ ನಾನು ಸೃಷ್ಟಿ ಕರ್ತನಾಗಿರುವೆನು. ನೀನು ದೇವತೆಗಳಲ್ಲಿ ಶ್ರೇಷ್ಠ ನಾಗಿರುವುದೂ ಅದರಿಂದಲೇ. ಹರಿ, ಹರ, ಎಲ್ಲರೂ ಶಕ್ತರಾಗಿರುವುದು ಆ ತಪಃಪ್ರಭಾವದಿಂದಲೇ. ನೀನು ಹೀಗೆ ಖಿನ್ನಮನನಾದೆಯೇಕೆ? ನವೀನ ಸ್ವರ್ಗ ದ ಅಧಿಕಾರವನ್ನು ತ್ರಿಶಂಕುವು ಪಡೆದುದಕ್ಕೆ ಕಾರ ಣವನ್ನು ಹೇಳುತ್ತೇನೆ ಕೇಳು. ತ್ರಿಶಂಕು ಮಹಾ ರಾಜನು ಸಹಸ್ರ ಯಜ್ಞಗಳನ್ನು ಮಾಡಿರುವನು. ಚಿರಕಾಲದಿಂದಲೂ ಅವನ ಮನಸ್ಸು ಧರ್ಮದಲ್ಲಿ ಯೇ ನಿರತವಾಗಿರುವುದು. ಪರಿಹಾಸಕ್ಕೂ ಅವನು ಸುಳ್ಳಾಡುವವನಲ್ಲ. ಇದರಿಂದಲೇ ಸಶರೀರನಾಗಿ ಸ್ವರ್ಗಕ್ಕೆ ಹೋಗಲು ಅಧಿಕಾರಿಯಾದನು. ಆದರೆ ಅವನ ಮನಸ್ಸಿನಲ್ಲಿ ಅಹಂಕಾರವು ತಲೆದೋರಿತು. ಅದಕ್ಕಾಗಿಯೇ ವಸಿಷ್ಠನು ಸ್ವರ್ಗಕ್ಕೆ ಸಶರೀರ ನಾಗಿ ಯಜ್ಞಮಾಡಿಸಲೊಪ್ಪಲಿಲ್ಲ. ಕರ್ಮ ಫಲದಿಂದ ಸ್ವರ್ಗಕ್ಕೆ ಹೋಗುತ್ತಿದ್ದವನು ಅಹಂಕಾರಕ್ಕೆ ಸಿಕ್ಕಿ ಕೆಳಕ್ಕೆ ಉರುಳಿದನು. ಬ್ರಹ್ಮರ್ಷಿಯಾದ ವಸಿಷ್ಠನ ನ್ನು ನಿರಾಕರಣೆ ಮಾಡಿದ್ದರಿಂದ ಚಂಡಾಲತ್ವವು ಬಂದಿತು.

ಇಂದ್ರ—ಅವನಿಗೆ ಸ್ವರ್ಗದಲ್ಲಿ ಸ್ಥಾನ ಸಿಕ್ಕದ್ದೇನೋ ನಿಜ. ಆದರೆ ಅವನಿಗಾಗಿ ಹೊಸ ಸ್ವರ್ಗವು ನಿರ್ಮಾ

ಣವಾಯಿತಲ್ಲವೆ? ಇದರಿಂದ ಮೊದಲಿಗಿಂತಲೂ ನೂರು ಪಾಲು ಹೆಚ್ಚು ಸನ್ಮಾನಕ್ಕೆ ಕಾರಣವಾಗುವುದಿಲ್ಲವೆ? ಅಖಂಡವಾದ ಆರಾಧನೆಗೆ ಯೋಗ್ಯವಾದ ಸಪ್ತರ್ಷಿಯ ಮಂಡಲವು ಅವನಿಗಾಗಿ ಸೃಷ್ಟಿಸಲ್ಪಟ್ಟಿತು. ಪರಬ್ರಹ್ಮನ ಉಪಾಸಕರೂ ಬ್ರಹ್ಮಜ್ಞಾನಿಗಳೂ ಅವನ ಸ್ವರ್ಗದಲ್ಲಿ ಸಂಚಾರ ಮಾಡುವರು. ನಮ್ಮ ಸ್ವರ್ಗವು ಗೌರವ ವಿಹೀನವಾಯಿತಲ್ಲವೆ? ಕೇವಲ ರಾಜರ್ಷಿಯಾದ ವಿಶ್ವಾಮಿತ್ರನು ತಪೋಬಲದಿಂದ ಸೃಷ್ಟಿಕರ್ತಾ ಎಂದೆನ್ನಿಸಿಕೊಂಡು ನಿನ್ನನ್ನೂ ತಿರಸ್ಕರಿಸಿರುವನು. ಇದರಿಂದಲೇ ಇಷ್ಟು ಖಿನ್ನನಾಗಿರುವೆನು.

ಬ್ರಹ್ಮ—ನೀನು ವಿಷಣ್ಣನಾಗಬೇಡ. ನನ್ನ ಬಲವಿಲ್ಲದೆ ಯಾರು ತಾನೇ ಸೃಷ್ಟಿಸಲು ಶಕ್ತರಾಗುವರು? ವಿಶ್ವಾಮಿತ್ರನು ಸೃಷ್ಟಿಸಿದ ಫಲಪುಷ್ಪಗಳೆಲ್ಲವೂ ನನ್ನವಾಗಿವೆ. ನನ್ನ ಸಹಾಯವಿಲ್ಲದಿದ್ದರೆ ಅವು ವಿಕಾಸವಾಗುವುದು ಹೇಗೆ? ಕ್ರಮವಾಗಿ ಎಲ್ಲವೂ ವಿಕಾಸವಾಗಬೇಕು. ಇದೇ ಆದಿ ಶಕ್ತಿಯ ನಿಯಮ. ಕಲಿಯುಗದ ರಹಸ್ಯವನ್ನರಿಯೆಯಾ? ವಿಜ್ಞಾನ ಪ್ರಭಾವದಿಂದ ಮಾನವರು ನವೀನವಾದ ಫಲಪುಷ್ಪಗಳನ್ನು ನಿರ್ಮಿಸುವರು. ಜಡಜ್ಞಾನದಿಂದ ಮಾಡಿದ ಶಕ್ತಿಯ ಆರಾಧನೆಯೇ ವಿಜ್ಞಾನ. ವಿಶ್ವಾಮಿತ್ರನು ಜಡಶಕ್ತಿಯನ್ನೇ ಆರ್ಜಿಸಿರುವನು. ಸಾಧಕರಾರೂ ಈ ರೀತಿ ಮಾಡುವುದಿಲ್ಲ. ಆಶ್ರಿತನನ್ನು ರಕ್ಷಿಸುವುದಕೋಸ್ಕರ ಶಕ್ತಿ

ಚಾಲನವನ್ನು ಮಾಡಿರುವನು. ಇದರಿಂದ ಅವನಿಗೆ ಕೆಡಕಾಗಲಿ ಅಧಃಪತನವಾಗಲಿ ಇಲ್ಲ. ಬ್ರಹ್ಮರ್ಷಿಯಾಗಬೇಕೆಂಬುದು ಅವನ ಉದ್ದೇಶ. ತನ್ನ ಉದ್ದೇಶವನ್ನು ತ್ಯಾಗಮಾಡಿ ಆಶ್ರಿತ ರಕ್ಷಣೆಗೆ ಮನಗೊಟ್ಟನು. ಬೋಧಗನ್ಯುವಾದ ಸತ್ವಗುಣವುಳ್ಳವನು ಶಕ್ತಿಯ ಪ್ರಭಾವದಿಂದ ಕೋಟಿ ವರುಷದ ತಪಸ್ಸನ್ನು ಸಂಪೂರ್ಣಮಾಡಬಲ್ಲನು. ಉಚ್ಚಪಥದಲ್ಲಿ ವಿಶ್ವಾಮಿತ್ರನು ಮುಂದಾಳಾದುದೇನೋ ನಿಜ. ನೀನು ಶಾಂತನಾಗು. ಶಕ್ತಿಯ ಪ್ರಭಾವವನ್ನು ತಿಳಿ. ಅಗಣಿತವಾದ ನಕ್ಷತ್ರಗಳೆಲ್ಲವೂ ಮಾನವನ ಹಿತಕ್ಕೇಕಾರಣವಾಗಿವೆ. ಎಂದೆಂದೂ ತುಷಾರ (ಹಿಮ) ಪೂರ್ಣವಾದ ಈ ಸ್ಥಳದಲ್ಲಿ ಆ ನಕ್ಷತ್ರಮಂಡಲವೇ ಉಜ್ವಲಿಸುವುದು. ಈ ಬೆಳಕಿನಿಂದ ಕೂಡಿದ ಜ್ಯೋತಿರ್ಮಂಡಲವು ಮಾನವ ವಸತಿಗೆ ಯೋಗ್ಯವಾಗುವುದು. ಅರ್ಧವರ್ಷ ಘೋರಾಂಧಕಾರದಲ್ಲಿ ಮುಳುಗಿರುವುದು. ಇಲ್ಲಿ ಜಡಬಲವೇ ಹೆಚ್ಚು. ಇಲ್ಲಿ ಜಪತಪಗಳನ್ನು ಯಾರೂ ಮಾಡುವುದಿಲ್ಲ. ನನ್ನ ಮಾತನ್ನು ಕೇಳು. ಸುರಪುರಿಗೆನಡೆ.

ಇಂದ್ರ—ಮಹಾಶಕ್ತಿಗೆರಗುವೆನು. ನನ್ನ ಅಜ್ಞಾನವನ್ನು ತೊಲಗಿಸಿದ ನಿನಗೂ ವಂದಿಸುವೆನು.

(ಇಬ್ಬರೂ ಹೋಗುವರು.)

———

## ಸಪ್ತರ್ಷಿ ಮಂಡಲ.

(ತ್ರಿಶಂಕು, ಬದರೀ, ಬ್ರಹ್ಮದೂತ, ಮತ್ತು ಸ್ವರ್ಗನಿವಾಸಿಗಳು.)

ಬ್ರಹ್ಮದೂತ—ಮಹಾರಾಜ! ಸ್ವರ್ಗಕ್ಕಿಂತಲೂ ಸುಂದರವಾಗಿ ವಿಶ್ವಾಮಿತ್ರನಿಂದ ಸೃಷ್ಟಿಸಲ್ಪಟ್ಟ ಈ ನವೀನ ಸ್ವರ್ಗಕ್ಕೆ ಇಂದಿನಿಂದ ನೀನೇ ಅಧೀಶ್ವರ. ನೀನು ಮಾಡಿದ ಸಹಸ್ರ ಯಜ್ಞಗಳ ಪ್ರಭಾವದಿಂದ ವಿಶ್ವಾಮಿತ್ರನು ನಿನಗೆ ಪುರೋಹಿತನಾಗಿ ನಿನ್ನ ಇಷ್ಟಾರ್ಥವನ್ನು ಈಡೇರಿಸಿದನು. ಭೂಲೋಕದಲ್ಲಿ ಭೋಗಾಶೆಯಿಂದ ಕಾಮ್ಯಕರ್ಮಗಳನ್ನು ಮಾಡುವರು. ನೀನು ಈ ಲೋಕದಲ್ಲಿ ಕೋಟಿ ಕಲ್ಪಗಳು ಭೋಗಾಧಿಕಾರವನ್ನು ನಡೆಸಬಹುದು. ರಾಜ! ರಾಣಿ! ಸಿಂಹಾಸನದಲ್ಲಿ ಕುಳಿತುಕೊಳ್ಳಿರಿ. (ತ್ರಿಶಂಕು ಮತ್ತು ಬದರಿಯು ಕುಳಿತುಕೊಳ್ಳುವನು.) ಜಯ! ಮಹಾರಾಜ ತ್ರಿಶಂಕುವಿಗೆ ಜಯ!

ತ್ರಿಶಂಕು—ಪ್ರಭು! ಇನ್ನು ಜಯಧ್ವನಿಯು ಸಾಕು. ನನಗೆ ಬಹಳ ನಾಚಿಗೆಯಾಗುತ್ತಿರುವುದು. ಯಾವ ಯಜ್ಞಫಲದಿಂದ ದೇವಲೋಕವು ಸೃಷ್ಟಿಯಾಯಿತೋ, ಯಾವ ಪುಣ್ಯಫಲದಿಂದ ಇಂದ್ರತ್ವವು ಸಿಕ್ಕುವುದೋ, ಆ ಯಜ್ಞದ ಪೂರ್ಣ ಮರ್ಯಾದೆಯು ನನ್ನ ಅನುಭವಕ್ಕೆ ಸಂಪೂರ್ಣವಾಗಿ ಬರಲಿಲ್ಲ. ಅಯ್ಯೋ! ಬ್ರಹ್ಮಲೋಕವಾಸಿಯೆ! ನಿನ್ನ ದರ್ಶನದಿಂದ ನನಗೆ ಜ್ಞಾನೋದಯವಾಯಿತು. ನಾನದೆಂತಹ ಕೆಟ್ಟ

ಸ್ವರ್ಗಕ್ಕೆ ಆಶೆಪಟ್ಟೆ. ಎಂತಹ ತುಚ್ಛ ಇಂದ್ರತ್ವವು ಸಿಕ್ಕಿತು. ಭೂಲೋಕದಲ್ಲಿ ರಾಜ್ಯರಕ್ಷಣೆಗೋಸ್ಕರ ಯಾವಾಗಲೂ ಒಂದು ಬಗೆಯ ಆತಂಕವಿದ್ದೇ ಇರುವುದು. ಯಾವಾಗ ಯಾವ ಶತ್ರುವಿನಿಂದ ನನ್ನ ಸಿಂಹಾಸನವು ನಷ್ಟವಾಗುವುದೋ ಎಂಬ ಭೀತಿ ಯಿದ್ದೇಇರುವುದು. ಇಂದ್ರ ಪದವಿಯು ದೊರಕಿ ದರೂ ಇದೇ ತರದ ಆತಂಕ—ಭೀತಿ ! ಆಶಾನಲವು ನೊಂದಿ ಹೋಗುವುದಿಲ್ಲ. ಭೂಮಿಯಲ್ಲಿರುವಷ್ಟು ಅತೃಪ್ತಿಯು ಇಲ್ಲಿಯೂ ಇರುವುದು. ಬ್ರಹ್ಮಲೋಕ ಕ್ಕೆ ಹೋಗಿ ನಿರಾಂಕನಾಗಿ ಬ್ರಹ್ಮಧ್ಯಾನದಲ್ಲಿ ಮಗ್ನ ನಾಗುವಂತೆ ನನಗೆ ಆಶೀರ್ವಾದ ಮಾಡು. ಅಷ್ಟೇ ಅಲ್ಲ. ವೈಕುಂಠವಾಸವೂ ದೊರೆಯುವಂತೆ ಹರಸು.

ಬ್ರಹ್ಮದೂತ—ಮಹಾರಾಜ ! ಭೋಗಕ್ಕೆ ಆಶೆಪಟ್ಟೆ. ನಿನ್ನ ಭೋಗಾಶಯವು ಪೂರ್ಣವಾಗಲಿ. ಕೊನೆ ಗಾಲಕ್ಕೆ ನಾರಾಯಣನು ನಿನ್ನ ಆಶೆಯನ್ನು ಪೂರೈ ಸುವನು. ಮಾನವ ದೇಹವನ್ನು ಪಡೆದ ಹೊರತು ಸಿದ್ಧಿಲಾಭವಾಗುವುದಿಲ್ಲ. ಭೂಲೋಕದಲ್ಲಿ ತಾಪಸಿ ಯಾಗಿಹುಟ್ಟಿ ವಿಷ್ಣುವನ್ನು ಪೂಜಿಸಿ ವೈಕುಂಠವಾಸಿ ಯಾಗಲು ಅಧಿಕಾರವನ್ನು ಸಂಪಾದಿಸಬೇಕು.

ಬದರೀ—ಪ್ರಭು ! ಸ್ನಾನೆಲ್ಲಿ ಕುಳಿತುಕೊಳ್ಳಬೇಕು.

ಬ್ರಹ್ಮದೂತ—ನೀನು ಪತಿವ್ರತೆ. ಪತಿಯ ಸನ್ನಿಧಿಯಲ್ಲಿ ಯೇ ಕುಳಿತುಕೊ.

ಬದರಿ—ಪ್ರಭು! ಇದೇನು? ಆನಂದದಿಂದ ನನ್ನ ಹೃದಯವು ಪರಿಪೂರ್ಣವಾಗಿರುವುದು. ಮನಸ್ಸಿನಲ್ಲಿ ಹೊಸಭಾವನೆಗಳು ತಲೆದೋರುತ್ತಿರುವುವು. ಉಜ್ಜ್ವಲವಾದ ತೇಜಸ್ಸು ದೇಹದಿಂದ ಹೊರಡುತ್ತಿರುವುದೇಕೆ?

ಬ್ರಹ್ಮದೂತ—ರಾಜದಂಪತಿಗಳೇ ಮರೆಯಬೇಡಿ. ನಿಮಗೆ ದೇವಶರೀರವು ಪ್ರಾಪ್ತವಾಗಿರುವುದು. ದೇವಭಾವದಿಂದ ಹೃದಯವು ಪೂರ್ಣವಾಗಿರುವುದು. ಜಯ! ನವೀನ ಸ್ವರ್ಗದ ರಾಜದಂಪತಿಗಳಿಗೆ ಜಯವಾಗಲಿ!

ಸ್ವರ್ಗನಿವಾಸಿಗಳು—ಜಯ! ನವಸ್ವರ್ಗ ರಾಜದಂಪತಿಗಳಿಗೆ ಜಯವಾಗಲಿ.

---

## ಮೂರನೆಯ ಅಂಕ.

---

### ೧. ಮೇನಕೆ ಮತ್ತು ರಂಭೆ.

ಮೇನಕೆ—ಕೇಳಿದೆಯಾ? ಹೊಸ ಸ್ವರ್ಗವನ್ನು ಸೃಷ್ಟಿಮಾಡಿರುವರಂತೆ! ಭೂಲೋಕದಲ್ಲಿ ಅದೆಂತಹ ಜನರಿರುವರು? ಅದಾರು ಘೋರ ತಪಸ್ಸನ್ನು ಮಾಡುತ್ತಿರುವರು? ಯಾರ ತಪಸ್ಸಿಗೆ ವಿಘ್ನಮಾಡಬೇಕೆಂದು ನಮ್ಮನ್ನು ಕಳುಹಿಸಿರುವರು? ಏನು—ವಿಶ್ವಾಮಿತ್ರನೆ? ಆವನು

ಅದೆಂತಹ ತಪಸ್ವಿ? ಈ ವಿಶ್ವಾಮಿತ್ರನು ಯಾರು? ಸಖಿ! ದೇವೇಂದ್ರನು ಈ ಋುಷಿಯ ತಪಸ್ಸಿಗೇಕೆ ಈವರೆಗೂ ವಿಘ್ನ ಮಾಡಲಿಲ್ಲ?

ರಂಭೆ—ವಿಶ್ವಾಮಿತ್ರನು ಮಹಾತೇಜಸ್ವಿಯಾದ ರಾಜನೆಂದು ಕೇಳಿರುವೆನು. ವಸಿಷ್ಠನೊಡನೆ ಮನಸ್ತಾಪವುಂಟಾಗಿ ಈತನು ಆ ಮಹರ್ಷಿಯ ಬ್ರಹ್ಮ ತೇಜಸ್ಸಿನಿಂದ ತನ್ನ ನೂರು ಮಂದಿ ಮಕ್ಕಳನ್ನೂ ಕಳೆದುಕೊಂಡನು. ಯುದ್ಧದಲ್ಲಿಯೂ ಸೋತನು. ಇದರಿಂದಲೇ ಈತನು ಬ್ರಹರ್ಷಿಯಾಗಲೇಬೇಕೆಂದು ದೃಢಸಂಕಲ್ಪನಾಗಿ ತಪಸ್ಸು ಮಾಡಲಾರಂಭಿಸಿರುವನು. ಈ ಸಂಕಲ್ಪವು ನೆರವೇರುವುದಿಲ್ಲನೆಂದು ತಿಳಿದು ಈತನ ತಪಸ್ಸಿಗೆ ವಿಘ್ನಮಾಡಲೆಳಸಲಿಲ್ಲ.

ಮೇನಕೆ—ಸಖಿ, ತಪೋಬಲದಿಂದ ವಿಶ್ವಾಮಿತ್ರನು ಬ್ರಹ್ಮರ್ಷಿಯಾಗುವುದಿಲ್ಲವೆಂದು ದೇವತೆಗಳೆಲ್ಲರೂ ತಿಳಿದಿರುವರೆ? ತನ್ನ ತಪೋಬಲದಿಂದ ಹೊಸ ಸ್ವರ್ಗವನ್ನು ಸೃಷ್ಟಿಮಾಡಿದವನು ಎಂದಿಗೂ ಸಾಮಾನ್ಯ ಮನುಷ್ಯನಲ್ಲ. ಅವನು ಮನುಷ್ಯರಲ್ಲಿ ಉತ್ತಮನೂ ಪರಾಕ್ರಮಿಯೂ ದೃಢಸಂಕಲ್ಪನೂ ಆಗಿರಲೇಬೇಕು. ರಂಭೆ! ಆತನು ಎಲ್ಲಿ ತಪಸ್ಸು ಮಾಡುತ್ತಿರುವನೋ? ಯಾವ ಪುಣ್ಯವತಿಯಾದ ರಮಣಿಯು ಆತನ ಸೇವೆಯಲ್ಲಿ ನಿರತಳಾಗಿರುವಳೋ?

ರಂಭೆ—ಮೇನಕೆ! ಇದೇನಾಶ್ಚರ್ಯ! ದೇವತೆಗಳನ್ನೆ

ಲ್ಲಾ ತೊರೆದು ಮನುಷ್ಯನನ್ನು ಹೊಂದಲಾಸೆ ಪಡು ತ್ತಿರುವೆ?

ಮೇನಕೆ—ಸಖಿ, ಹಾಸ್ಯಮಾಡುದಿಲ್ಲವೆಂದರೆ ನನ್ನ ಮನೋಭಾವವನ್ನು ಬಿಚ್ಚಿ ಹೇಳುವೆನು. ಭೂಮಿ ಯನ್ನೆಲ್ಲಾ ಸುತ್ತಿನೋಡಿದ್ದಾಯಿತು! ನರನಾರಿ ಯರು ಪ್ರೇಮಬಂಧನದಿಂದ ಸುಖಜೀವಿಗಳಾಗಿ ರುವರು. ಮದುವೆಯೆಂಬುದೇ ಪರಸ್ಪರ ಮನಸ್ಸಿನ ಕಲೆಯುವಿಕೆ. ಈ ಮನಸ್ಸು ಯಾರ ಆರಾಧನೆ ಮಾಡುವುದೋ, ದೇಹವು ಯಾರ ಸೇವೆಯಲ್ಲಿಯೇ ನಿರತವಾಗಿರುವುದೋ, ಯಾರಿಗೋಸ್ಕರ ಕಾಮ ಪಿಪಾಸೆಯು ದೂರವಾಗುವುದೋ ಅಂತಹವೊಡನೆ ವಿವಾಹವು ಸ್ವರ್ಗಸುಖಕ್ಕಿಂತಲೂ ಹೆಚ್ಚು ಆನಂದ ಕರವು. ಮನಸ್ಸಿಗೆ ಮನಸ್ಸಿಗೆ ಹೊಂದಿಕೆಯಿಲ್ಲದೆ ಕಾಮವಿಕಾರದಿಂದ ಕಲೆಯುವವರ ಜನ್ಮಕ್ಕೆ ನನ್ನಲ್ಲಿ ಧಿಕ್ಕಾರವೇ ಹೊರತು ಮರ್ಯಾದೆಯು ದೊರೆಯುವು ದಿಲ್ಲ. ನಾವೆಲ್ಲರೂ ಸ್ವರ್ಗದ ಬೆಲೆವೆಣ್ಣುಗಳಾಗಿರುವೆವು. ಭೂಲೋಕದವರ ಭಾಗ್ಯವೇಭಾಗ್ಯ. ಪ್ರೇಮದಿಂದ ದೇಹವಿತರಣೆಯೇ ಹೊರತು—

ರಂಭೆ—ಸುರಪುರದಲ್ಲಿ ದೇವತೆಗಳ ಸಹಚರಿಯಾಗಿದ್ದು ಭೂಲೋಕದ ಸ್ತ್ರೀಯರ ಸೌಖ್ಯಕ್ಕೆ ಮರುಳಾಗಿ ಅವರ ಸುಖಕ್ಕೆ ಅಸೂಯೆಪಡುವೆಯಲ್ಲಾ? ಭೂಮಿ ಯು ರೋಗಶೋಕಗಳಿಗೆ ಮೂಲಸ್ಥಾನ. ಪ್ರಾಯ ವೆಲ್ಲವೂ ಮುಪ್ಪಿನಲ್ಲಿ ಪರ್ಯವಸಾನವಾಗುವುದು. ಪೃಥ್ವಿ

ಯಲ್ಲೆಲ್ಲವೂ ಚಂಚಲ, ದಿನದಿನವೂ ಎಲ್ಲೆಲ್ಲಿಯೂ ಎಲ್ಲವೂ ಬದಲಾಯಿಸುತ್ತಿವೆ. ಯಾವುದೂ ಸ್ಥಿರ ವಿಲ್ಲ. ಇವೆಲ್ಲವೂ ಎಲ್ಲಿಗೆ ಹೋಗುವುವೋ ತಿಳಿ ಯದು.

ಮೇನಕೆ—ನೂರಾರು ಕಲ್ಪಗಳ ಸ್ವರ್ಗವಾಸಕ್ಕಿಂತ ಸ್ವ ತಂತ್ರವಾಗಿ ಜೀವಿಸುವುದು ಮೇಲು. ಸಾವು, ರೋಗ ಶೋಕಗಳು ಭೂಮಿಯಲ್ಲಿದ್ದರೂ, ಜೀವ ನವು ಇತರರ ಇಚ್ಛಾಧೀನವಾದುದಲ್ಲ. ಅಲ್ಲಿಯ ಕಾಡುಗುಡ್ಡಗಳು ಇಲ್ಲಿಯ ನಂದನ ವನದಂತೆ ದೇವ ತೆಗಳ ಇಚ್ಛಾಧೀನವಾದುದಿಲ್ಲ. ಅಲ್ಲಿ ತರುಲತೆಗಳೆ ಲ್ಲವೂ ಉದಾರ ಭಾವದಿಂದ ಅರಳುವುವು. ನರನಾರಿ ಯರ ಹೃದಯವೂ ಉದಾರವಾದುವು. ಪ್ರೇಮ, ದಾನ, ಪ್ರೇಮವಿತರಣೆ, ಇವೆಲ್ಲವೂ ಸಾಮಾನ್ಯವಾ ದುವೆಂದು ತಿಳಿಯಬೇಡ. ದೇಹವು ಮಣ್ಣಿನದಾಗಿ ರಬಹುದು. ಆದರೂ ಆ ಶರೀರದಲ್ಲಿಯೂ ಆತ್ಮನು ವಿಕಾಸವಾಗಿರುವನು. ಪೃಥ್ವಿಯಲ್ಲಿ ಸುದೃಢಸಂಕ ಲ್ಪವುಳ್ಳ ಮನುಷ್ಯರು ಮನಸ್ಸನ್ನು ಬಿಗಿ ಹಿಡಿದು ಉಚ್ಚಪದದಲ್ಲಿ ನಿಲ್ಲಿಸಿ ಬ್ರಹ್ಮನ ಪದವಿಯನ್ನೂ ಇಂದ್ರನ ಪದವಿಯನ್ನೂ ತುಚ್ಛವಾಗೆಣಿಸಿ ಪರಬ್ರಹ್ಮ ನಲ್ಲಿ ಸೇರಿಹೋಗುವರು. ನೀನು ಈ ಭೂಮಿಯು ಎಂತಹದೆಂಬುದನ್ನರಿಯೆ. ಬ್ರಹ್ಮಜ್ಞಾನವು ಹುಟ್ಟು ವುದು ಇಲ್ಲಿಯೇ. ಇದೇ ಕರ್ಮ ಕ್ಷೇತ್ರ. ಕರ್ಮ ಫಲದಿಂದಲೇ ಬ್ರಹ್ಮತ್ವವೂ ಇಂದ್ರತ್ವವೂ ದೊರೆಯು

ವುವು. ಸ್ವರ್ಗಕ್ಕಿಂತಲೂ ಭೂಮಿಯು ನೂರು ಪಾಲು ಮೇಲಾದದ್ದು. ನಡೆ ಹೋಗೋಣ, ಹೊತ್ತಾಯಿತು. ಸೂರ್ಯೋದಯಕ್ಕೆ ಮೊದಲೇ ಸಭೆಯಲ್ಲಿರಬೇಕು. (ಇಬ್ಬರೂ ತೆರಳುವರು)

## ೨. ಕಾಡುದಾರಿ.

ಹೂವನ್ನು ಕೊಯ್ಯುತ್ತಿರುವ ಶಕ್ತಿ.
(ರಾಜಾ ಕಲ್ಮಾಷಪಾದನ ಪ್ರವೇಶ)

ಶಕ್ತಿ—ಮಹಾರಾಜ! ಎಲ್ಲಿಗೆ ಹೋಗುತ್ತಿರುವಿರಿ?

ಕಲ್ಮಾಷ—ಯಾರು? ಶಕ್ತಿಯಲ್ಲವೆ? ಬಿಡುಬಿಡು. ದಾರಿ ಬಿಡು. ನಾನು ತಪೋವನಕ್ಕೆ ಹೋಗಬೇಕು.

ಶಕ್ತಿ—ತಪೋವನವು ಈ ಕಡೆಯಲ್ಲಿ ಎಲ್ಲಿರುವುದು? ನಮ್ಮ ತಂದೆಯ ತಪೋವನದ ಹಿಂಭಾಗಕ್ಕೆ ಬಂದಿರುವಿರಲ್ಲಾ?

ಕಲ್ಮಾಷ—ಸಾಕು! ಸಾಕು! ಸುಮ್ಮನಿರು. ನಿಮ್ಮ ತಂದೆಯ ತಪೋವನವೋ? ದಾಡಿಯನ್ನು ಬೆಳೆಸಿ, ಎಲ್ಲೋ ಕಾಡಿನಲ್ಲಿ ಕೆಲವು ಜಿಂಕೆಗಳನ್ನು ಬೆಳೆಸಿಕೊಂಡು ನಿತ್ಯನಿತ್ಯ ಹೋಮದ ನೆವದಿಂದ ಸ್ವಲ್ಪ ತುಪ್ಪವನ್ನು ಬೆಂಕಿಗೆ ಸುರಿದರೆ ತಪೋವನವಾಗೋದಿಲ್ಲಪ್ಪಾ, ಬಿಡು ಬಿಡು, ದಾರಿ ಬಿಡು. ನಾನು ಬಹಳ ದೂರ ಹೋಗಬೇಕು.

ಶಕ್ತಿ—ಮಹಾರಾಜ! ಇದೇನು ಹೀಗೆ ಹೇಳುವಿರಿ?

ನಾನು ದೇವರ ಪೂಜೆಗೆ ಹುವ್ವನ್ನು ಕೊಯ್ಯುತ್ತಿರುವೆನು. ಸ್ವಲ್ಪ ನಿಧಾನಿಸಬೇಕು. ಬೇಗ ಹೂಗಳನ್ನು ಕೊಯ್ದುಕೊಂಡು ಈಗಲೇ ಹಿಂದಿರುಗೋಣ. ಬ್ರಾಹ್ಮಣನಿಗೆ ಸನ್ಮಾನ ಮಾಡಬೇಕಾದ್ದು ಬ್ರಾಹ್ಮಣನ ಕರ್ತವ್ಯ. ಅಷ್ಟೇ ಅಲ್ಲ. ನಾನು ನಿಮ್ಮ ಪುರೋಹಿತನ ಮಗ. ನನ್ನ ಕೆಲಸಕ್ಕೆ ಅಡ್ಡಿ ಮಾಡಬೇಡಿ.

ಕಲ್ಮಾಷ—ನಡೆ ನಡೆ. ಇನ್ನು ನಿನ್ನ ಬ್ರಾಹ್ಮಣ್ಯವನ್ನು ನೋಡಬೇಕಾಗಿಲ್ಲ. ನಿಮ್ಮಪ್ಪನ ಬ್ರಾಹ್ಮಣ್ಯವಂತೂ ತಿಳಿಯಿತಲ್ಲಾ ! ಒಬ್ಬ ರಾಜಾ ತ್ರಿಶಂಕುವಿನಿಂದಲೇ ನಿಮ್ಮ ವಿದ್ಯಾಬುದ್ಧಿಗಳೆಲ್ಲವೂ ಹಾರಿಹೋದವಲ್ಲಾ ! ನಿಮ್ಮನ್ನು ಇನ್ನೂ ಪುರೋಹಿತರನ್ನಾಗಿಟ್ಟುಕೊಳ್ಳಬೇಕೋ ! ಮಹಾ ತಪಸ್ವಿಯಾದ ವಿಶ್ವಾಮಿತ್ರನನ್ನು ಪುರೋಹಿತನನ್ನಾಗಿ ಮಾಡಿಕೊಳ್ಳಲು ಹೋಗುತ್ತಿದ್ದೇನೆ. ನಡೆನಡೆ. ದಾರಿಬಿಡು. ನೀನು “ ಚಂಡಾಲನಾಗು ” ಎಂದು ಶಾಪವನ್ನುಕೊಟ್ಟೆ. ನಿಮ್ಮಪ್ಪನು “ ಎಂದಿಗೂ ನಿನ್ನನ್ನು ಈ ಶರೀರದೊಡನೆ ಸ್ವರ್ಗಕ್ಕೆ ಕಳುಹಿಸಲಾಗುವುದಿಲ್ಲ ” ಎಂದು ಹೇಳಿದನು. ಆ ಮಹರ್ಷಿಯಾದ ವಿಶ್ವಾಮಿತ್ರನ ಪ್ರಭಾವದಿಂದ, ತ್ರಿಶಂಕುವು ಕಾಲುಮೇಲೆ ಕಾಲುಹಾಕಿಕೊಂಡು ಕುಳಿತು ನವಸ್ವರ್ಗದಲ್ಲಿ ಅಪ್ಸರಸ್ತ್ರೀಯರೊಡನೆ ವಿಹರಿಸುತ್ತಿರುವನು. ದಾರಿಬಿಡು. “ ನಿನ್ನನ್ನು ನಾನು ಪುರೋಹಿತನಾಗಿಟ್ಟುಕೊಳ್ಳುವುದಿಲ್ಲ” ಎಂದು ನಿಮ್ಮಪ್ಪನಿಗೆ ಹೇಳಿಬಿಡು. ಪೌರೋಹಿತ್ಯಕ್ಕೆ ವಿಶ್ವಾಮಿತ್ರ

ನನ್ನು ಕರೆಯುವೆನು. ಸರಿದುಹೋಗು. ಹಾದಿ ಬಿಡು.

ಶಕ್ತಿ—ಮಹಾರಾಜನ ಅಭಿಪ್ರಾಯವಿದ್ದಂತಾಗಲಿ. ಹೇಳುವೆನು. ನಾನು ಹೂವನ್ನು ಕೊಯ್ಯುತ್ತಿರುವೆನು. ಸ್ವಲ್ಪ ತಾಳಿರಿ.

ಕಲ್ಮಾಷ—ಸರಿದು ನಿಲ್ಲುವುದಿಲ್ಲವೋ? ನಿನ್ನ ಒಣ ಬ್ರಾಹ್ಮಣಜಂಭವನ್ನು ನನ್ನ ಹತ್ತಿರ ತೋರಿಸುತ್ತೀಯೋ? ಕತ್ತೆ! ಅತ್ತ ಕಡೆ ನಡೆ. (ಎಂದು ಚಾಟಿಯಿಂದ ಹೊಡೆಯುವನು.)

ಶಕ್ತಿ—ನೃಪಾಧಮ! ನಿನ್ನ ರಾಕ್ಷಸನ ಆಚರಣೆಗೆ ತಕ್ಕಂತೆ ನೀನು ರಾಕ್ಷಸನೇ ಆಗು (ಎಂದು ಹೇಳಿ ಶಕ್ತಿಯು ತೆರಳುವನು.)

ಕಲ್ಮಾಷ—ಇದೇನು? ನನ್ನ ದೇಹದಲ್ಲಿ ಇದೇತರ ಬದಲಾವಣೆ! ಇದೇನು ಮನೋಭಾವ! ನರ ರಕ್ತವನ್ನು ಕುಡಿಯುವ ಆಸೆಯು ಹುಟ್ಟುತ್ತಿದೆ. ನಾನು ನಿಜವಾಗಿಯೂ ರಾಕ್ಷಸನಾದೆನೇನು? ಹಾಗಾದರೆ ನನಗೇನು ಗತಿ? ವಿಶ್ವಾಮಿತ್ರನೊಬ್ಬನೇ ಗತಿ. ಅವನ ಸಮೀಪಕ್ಕೆ ಹೋಗುವೆನು. ರಾಕ್ಷಸನಂತೆ ನರಮಾಂಸವನ್ನು ತಿನ್ನುವುದರಲ್ಲಿ ಆಸೆ! ಆದರೆ ರಾಕ್ಷಸರಂತೆ ದೇಹದಲ್ಲಿ ಬಲವಿಲ್ಲ. ಹಾಗಾದರೆ ಈ ಬ್ರಾಹ್ಮನ ಕತ್ತನ್ನು ಮುರಿದು ತಿನ್ನುವೆನು. (ಕಲ್ಮಾಷನು ಹೋಗುವನು.)

———

## ೩. ಕಾಡು.

### ವಿಶ್ವಾಮಿತ್ರನ ಆಶ್ರಮ.

### ವಿಶ್ವಾಮಿತ್ರ ಮತ್ತು ಸದಾನಂದ.

ಸದಾನಂದ—ಮಹಾರಾಜ! ಇನ್ನೂ ತಪಸ್ಸನ್ನೇಕೆ ಮಾಡುತ್ತಿರುವೆ? ನೀರಿನಲ್ಲಿ ಮುಳುಗಿ, ಸುತ್ತಲೂ ಅಗ್ನಿಜ್ವಾಲೆಯನ್ನು ಹೆಚ್ಚಿಸಿ ಮಧ್ಯೆಕುಳಿತು ತಲೆಕೆಳಕಾಗಿ ನಿಂತು ತಪಸ್ಸು ಮಾಡಿದ್ದು ಸಾಕು. ಈಗೆ ನಡೆ. ರಾಜ್ಯಕ್ಕೆ ಹಿಂದಿರುಗೋಣ.

ವಿಶ್ವಾ—ಸದಾನಂದ: ಅದೃಷ್ಟವು ಸುಮುಖವಾದರೆ ರಾಜ್ಯಕ್ಕೆ ಹಿಂದಿರುಗುವೆನು.

ಸದಾ—ವಿಪರೀತಕ್ಕೇ ಹೋಗುವುದೇಕೆ? ವಸಿಷ್ಠನಿಗೆ ತುಂಬ ಅಪಮಾನವನ್ನು ಮಾಡಿರುವೆ. ವಸಿಷ್ಠನ ತಾತನಿಗೂ ಸಾಧ್ಯವಾಗದ ಕೆಲಸವನ್ನೇ ಮಾಡಿದ್ದೀಯೆ. ನಿನ್ನ ಕಾಲಿಗೆ ಬೀಳುವೆನು. ನಡೆ. ರಾಜ್ಯಕ್ಕೆ ಹಿಂದಿರುಗು ಕಾಲಿನ ಮೇಲೆ ಕಾಲು ಹಾಕಿಕೊಂಡು ಹೊಟ್ಟೆತುಂಬ ಊಟಮಾಡಿಕೊಂಡಿರೋಣ.

ವಿಶ್ವಾ—ಏಕೆ? ತ್ರಿಶಂಕುವಿನಮಗನು ನಿನ್ನ ಯೋಗಕ್ಷೇಮವನ್ನು ಬಹಳ ಆದರದಿಂದ ನೋಡಿಕೊಳ್ಳುತ್ತಿರುವನಲ್ಲವೆ?

ಸದಾ—ಇಲ್ಲ. ಅಂತಹ ಉಮೇದುವಾರಿಯ ಕೆಲಸವನ್ನು ಮಾಡಲೆನಗಿಷ್ಟವಿಲ್ಲ. ನೀನು ರಾಜ್ಯಕ್ಕೆ ಹಿಂದಿರುಗದಿದ್ದರೆ ನನ್ನನ್ನು ಶಿಷ್ಯನನ್ನಾಗಿ ಮಾಡಿಕೋ.

ವಿಶ್ವಾ—ನನ್ನ ಶಿಷ್ಯನಾದರೆ ನಿನಗೆ ಸುಖವಿಲ್ಲ. ಮಲಗು ವಾಗ ಒಂದು ನೆಲ್ಲಿಯ ಹಣ್ಣು, ಅಥವಾ ಒಂದು ಆಳಲೆಯ ಕಾಯನ್ನು ತಿಂದು ಕಾಲಕಳೆಯ ಬೇಕಾ ಗುವುದು.

ಸದಾ—ಏಕೆ? ನನ್ನ ಶತ್ರುವು ಬೇಕಾದರೆ ನೆಲ್ಲಿಕಾಯ ನ್ನು ತಿಂದುಕೊಂಡಿರಲಿ. ಹಾಗಾದರೆ ನಿನ್ನಂತೆ ತಪಸ್ಸು ಮಾಡಿಕೊಂಡಿರಲಾರೆನೇ?

ವಿಶ್ವಾ—ಮಾಡಿಕೊಂಡಿರಬಲ್ಲೆಯಾ?

ಸದಾ—ಖಂಡಿತವಾಗಿಯೂ ಚೆನ್ನಾಗಿಯೂ ತಪ ಮಾಡಿಕೊಂಡಿರಬಲ್ಲೆ.

ವಿಶ್ವಾ—ತಲೆತೆಳಗಾಗಿನಿಂತು ತಪಸ್ಸನ್ನು ಮ ಬಲ್ಲೆಯೋ?

ಸದಾ—ಇರಲಾರೆ.

ವಿಶ್ವಾ—ಬೇಸಗೆಯಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ಯನ್ನು ಜ್ವಲಿಸಿ ಮಧ್ಯೆ ನಿಂತು ಜಪಮಾಡಬಲ್ಲೆ

ಸದಾ—ಇಲ್ಲ, ಇರಲಾರೆ.

ವಿಶ್ವಾ—ಮಳೆಗಾಲದಲ್ಲಿ ನೀರಿನಲ್ಲಿ ಕುಳಿತು ತಪ ಮಾಡಬಲ್ಲೆಯಾ?

ಸದಾ—ಇಲ್ಲ, ಇರಲಾರೆ.

ವಿಶ್ವಾ—ಹಾಗಾದರೇನು ಮಾಡಬಲ್ಲೆ?

ಸದಾ—ಊಟದ ಹೊತ್ತಿಗೆ ಸರಿಯಾಗಿ ಪದ್ಮಾ ವನ್ನು ಹಾಕಿಕೊಂಡು ಕುಳಿತುಕೊಳ್ಳಬಲ್ಲೆ.

ಗುವಾಗ ಅಂಬಾಸನದಲ್ಲಿ ಕಣ್ಣು ಮುಚ್ಚಿಕೊಂಡು ಇರಬಲ್ಲೆ.

ವಿಶ್ವಾ—ಇಂತಹ ಕಠೋರ ತಪಸ್ಸನ್ನು ಎಷ್ಟು ದಿನದಿಂದ ಮಾಡುತ್ತಿರುವೆ?

ಸದಾ—ಬಹಳ ದಿವಸಗಳಿಂದ!

ವಿಶ್ವಾ—ಮತ್ತೇನು! ನಿನಗೆ ತಪಸ್ಸಿದ್ಧಿಯಾಗಿಯೇ ಇರುವುದು.

ಸದಾ—ಹಾಗೆ ಸಿದ್ಧಿಯಾಗಿದ್ದರೆ ನಿನ್ನಲ್ಲಿ ಜಗಳವಾಡಲು ಬರುತ್ತಿದ್ದೆನೇನು?

ವಿಶ್ವಾ—ನೀನು ಸಿದ್ಧನಾದರೆ (ತಪಸ್ಸಿದ್ಧಿಯನ್ನು ಹೊಂದಿದರೆ) ಏನು ಮಾಡುವೆ?

ಸದಾ—ಒಂದೆರಡು ಗಿಡಗಳನ್ನು ಸೃಷ್ಟಿಮಾಡುವೆನು? ಮತ್ತೇನು ಮಾಡಬೇಕು?

ವಿಶ್ವಾ—ಯಾವ ಗಿಡಗಳು?

ಸದಾ—ಯಾವ ಗಿಡದಲ್ಲಿ ಬಲು ರುಚಿಯಾಗಿರುವ ಜಿಂಕೆಯ ಮಾಂಸವು ತೂಗಾಡುತ್ತಿರುವುದೋ, ಯಾವ ಮರದಲ್ಲಿ ಬಿಸಿಬಿಸಿಯಾಗಿ ಹಸುವಿನ ತುಪ್ಪವು ಉಕ್ಕುತ್ತಿರುವುದೋ, ಯಾವ ಮರದಲ್ಲಿ ಸೊಗಸಾದ ಆಡಿನ ಮಾಂಸವು ಜೋತಾಡುತ್ತಿರುವುದೋ, ಯಾವ ಮರದ ಕೊನೆಯಲ್ಲಿ ರುಚಿಯಾದ ದೂದ್ ಫೇಡಾ, ಮತ್ತೊಂದು ಕೊನೆಯಲ್ಲಿ ಮಿಠಾಯಿ, ಮತ್ತೊಂದು ಕೊನೆಯಲ್ಲಿ ಪೂರೀ, ಮತ್ತೊಂದು ಕೊನೆಯಲ್ಲಿ ಬಿಸಿಬಿಸಿಯಾದ ಹಲ್ವಾ ಇವುಗಳು.—

ವಿಶ್ವಾ—ನಾನು ಈಗ ಹಿಮಾಲಯದ ಶಿಖರಕ್ಕೆ ಹೋಗು ವೆನು. ನೀನು ಆ ಚಳಿಯಲ್ಲಿ ನನ್ನ ಜೊತೆಯಲ್ಲಿ ಬೆಟ್ಟ ವನ್ನು ಹತ್ತಿ ಬರಬಲ್ಲೆಯಾ ?

ಸದಾ—ಇಷ್ಟು ವಿಪರೀತ ಮಾಡಿದರೆ ನಾನು ಬರಲಾಗು ವುದೇ? ಇಲ್ಲಿಯೇ ಹೀಗೆ ಗಡಗಡನೆ ನಡುಗುತ್ತಿರು ವೆನು. ಇನ್ನು ಬೆಟ್ಟವನ್ನು ಹತ್ತಬಲ್ಲೆನೇ?

ವಿಶ್ವಾ—ನನ್ನ ಮನಸ್ಸಿನಲ್ಲಿ ಏನೇನೋ ವಿಕಾರಗ ಳುಂಟಾಗುತ್ತಿವೆ. ಧ್ಯಾನಕ್ಕೆ ಕುಳಿತರೆ ಮೃತರಾದ ನನ್ನ ನೂರು ಮಂದಿ ಮಕ್ಕಳೂ ಇದಿರಿಗೆ ಬಂದು ನಿಲ್ಲುವರು. "ತಂದೆಯೇ! ಪ್ರತೀಕಾರಮಾಡ ಬೇಕೆಂದು ಬಹಳ ಆಸೆಯಾಗುವುದು. ಪ್ರತಿಹಿಂಸೆ! ಮಾಡಲೇಬೇಕು. ಆ ವಸಿಷ್ಠನ ನೂರು ಮಂದಿ ಮಕ್ಕಳ ರಕ್ತವನ್ನು ಕುಡಿದಹೊರತು ಈ ದಾಹವು ಅಡಗುವ ಹಾಗಿಲ್ಲ." ಎಂದು ಹೇಳುವರು. ಇದಲ್ಲದೆ ಮತ್ತೇನೂ ತೋರುವುದಿಲ್ಲ. ಇದೇ ನನ್ನ ಮನಸ್ಸಿ ನಲ್ಲಿ ಕುದಿಯುತ್ತಿರುವುದು. ಈ ನನ್ನ ಮೋಹವು ಇಷ್ಟು ತಪಸ್ಸು ಮಾಡಿದರೂ ಹೋಗಲಿಲ್ಲವಲ್ಲಾ? ಬಲಿಷ್ಠರಾದ ಈ ನನ್ನ ಶತ್ರುಗಳು ಎಂದಿಗೆ ನಾಶ ವಾಗುವರೋ!

(ವಿಶ್ವಾಮಿತ್ರನು ತೆರಳುವನು)

ಸದಾ—ಇಲ್ಲ. ಈ ಬಾರಿ ಹೋದರೆ ಸೂರ್ಯದೇವನಿಗೆ ಸಮೀಪವಾಗಿರುವ ಹಿಮಾಲಯಕ್ಕೆ ಹೊರಟು ಹೋ

ಗುವನು. ರಾಜನನ್ನು ನೋಡುವುದಕ್ಕಾಗುವುದಿಲ್ಲ. ಅವನು ಸಿಕ್ಕುವುದೂ ಇಲ್ಲ. ನಾನೇನು ಮಾಡಲಿ? ಅವನ ಜೊತೆಯಲ್ಲಿ ಹೋಗುವುದಕ್ಕೋ ಆಗುವುದಿಲ್ಲ ಬೆಟ್ಟದ ಹಾದಿಯಲ್ಲಿ ಒಂದು ಸಲ ಎಡವಿ ಬಿದ್ದಿದ್ದಕ್ಕೇ ಬ್ರಹ್ಮಣ್ಯದೇವನು ಅಷ್ಟು ಕಷ್ಟಪಡಬೇಕಾಯಿತು. ಇನ್ನೊಂದು, ಋಷಿಯ ಮಗನೊಬ್ಬನು ರಾಜನೊಬ್ಬನಿಗೆ ಶಾಪವನ್ನು ಕೊಟ್ಟನು. ಆತನು ಈಗೆ ಯಜಮಾನನಾಗಲು ಬಂದಿದ್ದನು. ಈಗ ಗಲಾಟೆ ಮಾಡಿದರೆ ಆತನು ನಾಲ್ಕಾರು ದಿನಗಳು ನನ್ನನ್ನು ನೋಡಿಕೊಳ್ಳುತ್ತಿದ್ದನು. ಅಂತಹ ರಾಜರೂ ಸತ್ತರು. ಋಷಿಪುತ್ರರೂ ಸತ್ತರು. ವಸಿಷ್ಠನ ಮಕ್ಕಳೆಲ್ಲರೂ ಕಣ್ಣು ಮುಚ್ಚಿಕೊಂಡು ಸುಮ್ಮನೆ ಕುಳಿತಿರುವರು. ಅದನ್ನು ನೋಡುವುದಕ್ಕೇ ಬಂದೆನು. ಇವನು ಯಾರು ಬರುತ್ತಿರುವವನು? ವೇಷಭೂಷಾದಿಗಳು ಚೆನ್ನಾಗಿವೆ. ರಾಜನಾಗಿದ್ದರೂ ಇರಬಹುದು.

(ಕಲ್ಮಾಷಪಾದನ ಪ್ರವೇಶ)

ಕಲ್ಮಾಷ—ಪ್ರಭು! ಇಲ್ಲಿ ಮಹಾತಪಸ್ವಿ-

ಸದಾ—ಸುಮ್ಮನಿರು. ಗಟ್ಟಿಯಾಗಿ ಮಾತನಾಡಬೇಡ. ಒಂದೆರಡು ಮಾತುಗಳಿಗೆ ಜಬಾಬು ಕೊಡು. ನೀನು ರಾಜನೇನು?

ಕಲ್ಮಾಷ—ಹೌದು.

ಸದಾ—ನಿನಗೆ ಶಾಪಕೊಟ್ಟರೇನು?

ಕಲ್ಮಾಷ—ಹೌದು ಸ್ವಾಮಿ! ದಯವಿಡಬೇಕು. ವಸಿಷ್ಠನ ಮಗ ಶಕ್ತ್ರಿಯು ಶಾಪ ಕೊಟ್ಟಿರುವನು.

ಸದಾ—ಒಳ್ಳೆಯ ಕೆಲಸ ಮಾಡಿದೆ. ವಿಶ್ವಾಮಿತ್ರನನ್ನು ಪುರೋಹಿತನಾಗಬೇಕೆಂದು ಕರೆಯಲು ಬಂದಿರುವೆಯಲ್ಲವೆ?

ಕಲ್ಮಾಷ—ಹೌದು. ಆತನ ಆಶ್ರಯವನ್ನು ಬೇಡಲು ಬಂದಿರುವೆನು.

ಸದಾ—ಹಾಗಾದರೆ ನಡೆ. ಯಜ್ಞದ ಏರ್ಪಾಡನ್ನು ನಡೆಸು. ಈ ಶರೀರದೊಡನೆ ಸ್ವರ್ಗಕ್ಕೆ ಹೋಗುವೆ.

ಕಲ್ಮಾಷ—ಪ್ರಭು! ನಾನು ಯಜ್ಞ ಮಾಡಬೇಕೆಂಬ ಉದ್ದೇಶದಿಂದ ಬರಲಿಲ್ಲ.

ಸದಾ—ಆ ಉದ್ದೇಶದಿಂದಲೇ ಬರಬೇಕು. ಹಾಳಾಗಲಿಷ್ಟವುಳ್ಳವರು ಶೂನ್ಯ ದೇಶದಲ್ಲಿ ನೇತಾಡಬೇಕು.

ಕಲ್ಮಾಷ—ನನ್ನ ಮನೋದುಃಖವನ್ನು ಅವರ ಪಾದಪದ್ಮಗಳಲ್ಲಿ ಅರಿಕೆಮಾಡಿಕೊಳ್ಳಬೇಕೆಂದಿರುವೆನು.

ಸದಾ—ಬೇಕಾದ್ದನ್ನು ಮಾಡು. ಈಗ ಯಜ್ಞಮಾಡುವಿಯೋ ಇಲ್ಲವೋ? ಹೇಳು.

ಕಲ್ಮಾಷ—ಅವರು ಅಪ್ಪಣೆಕೊಟ್ಟರೆ ಮಾಡುವೆನು.

ಸದಾ—ಅವರು ಅಪ್ಪಣೆ ಕೊಟ್ಟಿರುವರು. ನೀನು ಬರುವುದನ್ನು ಅವರು ಧ್ಯಾನಯೋಗದಿಂದ ತಿಳಿದು ನೀನು ಬಂದರೆ ಇಲ್ಲಿಯೇ ಇರುವಂತೆ ಹೇಳೆಂದು ನನಗೆ ಹೇಳಿರುವರು. ನೀನು.... ನಿನ್ನ ಹೆಸರೇನು?

ಕಲ್ಮಾಷ—ಕಲ್ಮಾಷಪಾದ.

ಸದಾ—ಹೌದು ಹೌದು. ಹೇಳಿಹೋದರು- ಕಮಲಾ ಪದ-ನೆಂದು ಹೌದು. ಕಮಲಾಪದ.

ಕಲ್ಮಾಷ—ಅಲ್ಲ. ಕಲ್ಮಾಷಪಾದನೆಂದು ಹೆಸರು.

ಸದಾ—ಅಯ್ಯೋ! ನಿನಗೆ ಸ್ವಲ್ಪವೂ ಬುದ್ಧಿಯಿಲ್ಲ. ಪುನಃ ವಾದಮಾಡಲು ಆರಂಭಿಸಿದನಲ್ಲಾ!

ಕಲ್ಮಾಷ—ಏನು ಮಾಡಲಿ? ದಾಹದಿಂದ ಗಂಟಲು ಒಣಗುತ್ತಿರುವುದು.

ಸದಾ—ಹಾಗೆಯೇ ಆಗಲೇಬೇಕು. ಯಜ್ಞಮಾಡಲು ಆಸೆಯಿರುವವರಿಗೂ ಹಾಗೆಯೇ.

ಕಲ್ಮಾಷ—ವಸಿಷ್ಠನ ಮಗನು "ನೀನು ರಾಕ್ಷಸನಾಗು" ಎಂದು ಶಾಪ ಕೊಟ್ಟಿರುವನು ನೋಡಿ. ನನಗೆ ರಾಕ್ಷ ಸರ ಬುದ್ಧಿಯೇ ಹುಟ್ಟುತ್ತಿದೆ. ಗಂಟಲು ಒಣಗಿ ಹೋಯಿತು. ನಿಜವಾಗಿಯೂ ರಾಕ್ಷಸನಾಗಿ ಹೋದೆನು. ನಿಶ್ಚಯ, ರಾಕ್ಷಸನಾಗಿರುವೆನು.

ಸದಾ—ಅಬ್ಬಬ್ಬಾ! ಇವನೇನು ಹೇಳಿದ್ದು?

ಕಲ್ಮಾಷ—ಹೌದು, ನಾನು ರಾಕ್ಷಸನಾಗಿರುವೆನು.

ಸದಾ—ಓಡು, ತಪೋವನದಿಂದ ಓಡಿಹೋಗು. ಓಡಿ ಹೋಗಿ ರಾಕ್ಷಸನಾಗು.

ಕಲ್ಮಾಷ—ಪ್ರಭು! ಬಹಳ ದಾಹ! ದಾಹ! ನಿಮ್ಮ ಕೈಯನ್ನಾದರೂ ಕಡಿದು ಸ್ವಲ್ಪ ರಕ್ತವನ್ನು ಹೀರಿ ದಾಹವನ್ನಡಗಿಸಿಕೊಳ್ಳಲೇ?

ಸದಾ—ಬೇಡ ಬೇಡ! ನೀನು ಸ್ವಲ್ಪ ಸ್ಥಿರ ಮನಸ್ಸಿನಿಂದ ಕುಳಿತುಕೊ. ನಾನು ಹೋಗಿ ಚೂರಿಯನ್ನು ತೆಗೆದು ಕೊಂಡು ಬರುವೆನು. ತಲೆಯನ್ನೇ ಕತ್ತರಿಸಿ ಬಿಡು. ನೀನು ಎಳನೀರನ್ನು ಹಿಡಿದುಕೊಳ್ಳುವ ಹಾಗೆ ಎರಡು ಕೈಗಳಿಂದಲೂ ನನ್ನ ತಲೆಯನ್ನು ಹಿಡಿದುಕೊಂಡು ರಕ್ತವನ್ನು ಕುಡಿ.

ಕಲ್ಮಾಷ—ಇಲ್ಲ, ಹಾಗೆ ಮಾಡುವುದಿಲ್ಲ. ಒಂದೇ ಗುಟುಕಿಗೆ ಹೀರಿಬಿಡುವೆನು.

ಸದಾ—ಅದು ಯಾರಪ್ಪಾ?

(ವಿಶ್ವಾಮಿತ್ರನ ಪ್ರವೇಶ)

ವಿಶ್ವಾ—ಸಖನೆ! ಏನು? ಏನು? ನಿನಗೇನಾಯಿತು?

ಸದಾ—ಮಹಾರಾಜ! ಕಾಪಾಡು! ಕಾಪಾಡು! ಈ ರಾಕ್ಷಸನು ನನ್ನ ರಕ್ತವನ್ನು ಹೀರುವನಂತೆ.

ವಿಶ್ವಾ—ನೀನು ಯಾರು? ರಾಜಾ ಕಲ್ಮಾಷಪಾದನಲ್ಲವೆ?

ಕಲ್ಮಾಷ—ಹೌದು, ನಾನು ವಸಿಷ್ಠನ ಮಗ ಶಕ್ತಿಯ ಶಾಪದಿಂದ ರಾಕ್ಷಸತ್ವವನ್ನು ಹೊಂದಿರುವೆನು. ನನಗೆ ನರ ರಕ್ತ, ನರ ಮಾಂಸ ಇವುಗಳಲ್ಲಿಯೇ ರುಚಿಯೂ ಆಸೆಯೂ ಹುಟ್ಟುತ್ತಿದೆ. ಮನಸ್ಸಿನಲ್ಲೇನೋ ಘೋರ ವಿಕಾರವಾಗುತ್ತಿದೆ.

ವಿಶ್ವಾ—ನನ್ನ ಸಮೀಪಕ್ಕೇಕೆ ಬಂದೆ?

ಕಲ್ಮಾಷ—ನನಗೇನಾದರೂ ಇದರಿಂದ ಬಿಡುಗಡೆಯಾಗಲು ಉಪಾಯವುಂಟೇ ?

ವಿಶ್ವಾ—ಮಹಾರಾಜ ! ಬ್ರಾಹ್ಮಣರ ಕೃಪೆಯೊಂದಲ್ಲದೆ ನಿನಗೆ ಮತ್ತಾವ ಉಪಾಯವೂ ಇರುವುದಿಲ್ಲ. ನಾನು ಇನ್ನೂ ಬ್ರಹ್ಮರ್ಷಿತ್ವವನ್ನು ಹೊಂದಿಲ್ಲ. ನೀನು ಯಾವನಾದರೂ ಬ್ರಹ್ಮರ್ಷಿಗೆ ಶರಣಾಗತನಾಗು. ನಿನಗೆ ಮತ್ತೇನಾದರೂ ವರವು ಬೇಕಾದರೆ ಹೇಳು. ಕೊಡಲು ಸಿದ್ಧನಾಗಿರುವೆನು.

ಕಲ್ಮಾಷ—ಪ್ರಭು! ಹಾಗಾದರೆ ನನ್ನ ಮನಸ್ಸಿನಲ್ಲಿ ತಲೆದೋರುವ ರಾಕ್ಷಸ ಪ್ರವೃತ್ತಿಗೆ ತಕ್ಕಂತೆ ನನ್ನ ದೇಹದಲ್ಲಿ ರಾಕ್ಷಸರಿಗೆ ತಕ್ಕ ಶಕ್ತಿಯುಂಟಾಗುವಂತೆ ವರವನ್ನು ಕೊಡಬೇಕು.

ವಿಶ್ವಾ—ನಡೆ, ಹಾಗೆಯೇ ಆಗುವುದು. ಕಿಂಕರನೆಂಬೊಬ್ಬ ರಾಕ್ಷಸನು ಇರುವನು. ಅವನು ನಿನ್ನ ದೇಹವನ್ನು ಪ್ರವೇಶಿಸುವನು. ನಿನಗೆ ನೂರು ಆನೆಗಳ ಬಲವು ಬರುವುದು. ನಡೆ ಹೋಗು.

ಕಲ್ಮಾಷ—ಬಹಳ ಸಂತೋಷ ! ರಾಕ್ಷಸನಾದೆನು. ಒಳ್ಳೆಯದಾಯಿತು. ವಸಿಷ್ಠನ ನೂರು ಮಂದಿ ಮಕ್ಕಳ ಕತ್ತುಗಳನ್ನೂ ಮುರಿಯುವೆನು.

(ಕಲ್ಮಾಷನು ತೆರಳುವನು)

[ಅಕಸ್ಮಾತ್ತಾಗಿ ಆಕಾಶ ಮಾರ್ಗದಲ್ಲಿ 'ತಂದೆಯೇ!'

ನಮ್ಮ ಪ್ರತಿಹಿಂಸೆಯ ಆಸೆಯು ತೀರಿತು, ಪೂರೈಸಿತು! ಎಂದು ಶಬ್ದವಾಗುವುದು.]

ವಿಶ್ವಾ—ಮತ್ತೇನೂ ಅಲ್ಲ. ನನ್ನ ಮನಸ್ಸಿನ ಮೋಹ ಜನಿತ ಪ್ರತಿ ಹಿಂಸೆಯ ಪ್ರತಿಧ್ವನಿ. ಅಯ್ಯೋ! ಏನು ಮಾಡಿದೆ! ಕಲ್ಮಾಷಪಾದನಿಗೆ ರಾಕ್ಷಸ ಶಕ್ತಿಯು ಬರಲೆಂದು ವರವನ್ನು ಕೊಟ್ಟೆನೇಕೆ? ಸಂಸಾರದಲ್ಲಿ ಎಂತಹ ಮಹಾ ಅನಿಷ್ಟವು ಉಂಟಾಗಬಹುದೆಂಬುದನ್ನು ಯಾರು ಬಲ್ಲರು? ನನ್ನ ತಪಸ್ಸಿಗೆ ಬಹಳ ವಿಘ್ನವಾಯಿತು.

(ವಿಶ್ವಾಮಿತ್ರನು ತೆರಳುವನು)

ಸದಾ—ಸಾಕು ಸಾಕು. ಇನ್ನು ರಾಜನಲ್ಲಿ ಮಮತೆಯಿಂದ ಪ್ರಯೋಜನವಿಲ್ಲ. ಪ್ರಾಣವೇ ಬಲು ದೊಡ್ಡ ಐಶ್ವರ್ಯ! ರಾಜನು ತಲೆಕೆಳಗಾಗಿ ನಿಂತು ನೇತಾಡಲಿ. ನಾನು ಅವನಿರುವ ದಿಕ್ಕಿಗೂ ಮುಖ ಹಾಕುವುದಿಲ್ಲ. ಕಲ್ಮಾಷಪಾದ! ನೀನು ಸಾಯಿ! ರಾಜಾ ತ್ರಿಶಂಕುವಿನಂತೆ ನೀನು ಚಂಡಾಲನಾಗಿ ಒಂದು ಯಜ್ಞನಾದರೂ ಆಗಲಿ! ರಾಕ್ಷಸನಾಗಿ ಬಿಟ್ಟು ಏನೇನು ಮಾಡಿದ!

(ತೆರೆಯಲ್ಲಿ ಮೇನಕೆ ಮುಂತಾದ ಅಪ್ಸರ ಸ್ತ್ರೀಯರ ಸಂಗೀತ)

ಸದಾ—ಅಬ್ಬಬ್ಬಾ! ಮತ್ತೇನು ಬಂತು? ಇನ್ನೇನೂ ಇಲ್ಲ. ರಾಕ್ಷಸಿ! ಮುಂಡೇರು ಮಾಯಮಾಡಿ ಮೋ

ಹಿಸಿಯಂತೆ ರೂಪು ಮಾಡಿಕೊಳ್ಳುತ್ತಾರಂತೆ! ಮನುಷ್ಯರಲ್ಲ. ಮನುಷ್ಯರಲ್ಲಿ ಯಾರು ಹೀಗಿದ್ದಾರೆ! ಈಗ ಸುಮ್ಮನೆ ಸುತ್ತಿ ಏನು ಮಾಡುವರು? ಅವರ ಕಣ್ಣಿಗೆ ಬಿದ್ದರೆ ಕತ್ತು ಮುರಿದು ಬಿಡುವರು. ಒಂದು ಕಡೆಯಲ್ಲಿ ಮರದ ತುಂಡಿನಂತೆ ಬಿದ್ದಿರುವೆನು.

(ಸದಾನಂದನು ಒಂದು ಕಡೆ ಕೈಕಾಲು ಮುದುರಿಕೊಂಡು ಮಲಗುವನು.)

ಊರ್ವಶೀ—ಆಹಾ ಅಲ್ಲಿ ನೋಡು ಆ ಬ್ರಾಹ್ಮಣನು ಹಾಗೆ ಅಲ್ಲಿ ಬಿದ್ದಿರಬಹುದೇಕೆ? ಹೇಳು, ನೋಡೋಣ. ನಡೆ ನೋಡೋಣ, ಸಂಕಟಪಡುತ್ತಿರಬಹುದು.

ಸದಾ—ಇಲ್ಲಿ ನೋಡು. ಅಯ್ಯಯ್ಯೋ! ಇತ್ತ ಕಡೆಗೇ ಮುಂಡೇರು ಬರುತ್ತಾರಲ್ಲಾ? ಅವರಿಗೆ ಮನುಷ್ಯರ ವಾಸನೆಯು ತಿಳಿದು ಹೋಯಿತು. ಯಾವ ಕೆಟ್ಟ ಮುಹೂರ್ತದಲ್ಲಿ ತಪೋವನಕ್ಕೆ ಹೋಗಬೇಕೆಂದು ಮನೆಯಿಂದ ಹೊರಟೆನೋ! ರಾಕ್ಷಸನ ಕೈಗೆ ಸಿಕ್ಕಿ ಪ್ರಾಣದೊಡನೆ ಬದುಕಿ ಬಂದೆ. ಈಗ ರಾಕ್ಷಸಿಯರ ಕೈಗೆ ಸಿಕ್ಕಿಕೊಂಡೆನಲ್ಲಾ! ಅವರ ಮುಖವನ್ನು ನೋಡಿದರೇ ಅವರ ಉದ್ದೇಶವು ಗೊತ್ತಾಗುತ್ತದೆ. ಮನುಷ್ಯರ ಹೊಸರಕ್ತವನ್ನು ಈಗಲೇ ಕುಡಿಯಬೇಕೆಂದು ಬರುತ್ತಿರುವರಲ್ಲಾ?

ಊರ್ವಶೀ—ಅಯ್ಯಾ! ಬ್ರಾಹ್ಮಣ! ನೀನು ಹೀಗೇಕೆ ಬಿದ್ದಿರುವೆ?

ಸದಾ—ನಾನು ಮನುಷ್ಯನಲ್ಲ. ತಾಯಿ! ರಾಕ್ಷಸಿಗಳಿರಾ, ಮುಂದೆ ಹೋಗಿ ನೋಡಿ. ಬಹಳ ರಕ್ತಪುಷ್ಟರಾದ ಮನುಷ್ಯರು ಸಿಕ್ಕುವರು. ಹಗಲೂ ರಾತ್ರಿ ರಕ್ತಪಾನ ಮಾಡಬಹುದು.

ಊರ್ವಶೀ—ನೀನೂ ಮನುಷ್ಯನೇ! ಮೃಗವಲ್ಲ.

ಸದಾ—ನಿಮಗೆ ಗೊತ್ತಿಲ್ಲ. ತಪೋವನದಲ್ಲಿ ಮೃಗಗಳಿರುವುದೇ ಹೀಗೆ.

ಊರ್ವಶಿ—ನಮಗೆ ಮೃಗಗಳನ್ನು ಕಂಡರೇ ಬಹಳ ಪ್ರೀತಿ. ಅಕ್ಕ! ನಡೆ ಕರೆದುಕೊಂಡು ಹೋಗೋಣ. ಎಂತಹ ತಿಂಡಿಯನ್ನು ಮಾಡಿ ತಿನ್ನೋಣ?

ಸದಾ—ಇಲ್ಲ. ಇಲ್ಲ. ನಾನು ಮುದಿಮೃಗ. ನನ್ನನ್ನು ನೀವೇನಾದರೂ ಕತ್ತರಿಸಿ ತಿಂದಿರೋ ಏಳೆಂಟು ದಿನ ಬಾಯಿ ರುಚಿಯು ಕೆಟ್ಟು ಹೋಗುವುದು. ಹಾಗಿಲ್ಲದಿದ್ದರೆ ಮುನಿಕುಮಾರರು ಇದುವರೆಗೂ ನನ್ನನ್ನು ತಿನ್ನದೆ ಬಿಡುತ್ತಿದ್ದರೇನು?

ಊರ್ವಶೀ—ಒಳ್ಳೆಯದು. ಅಯ್ಯಾ ಮುದಿ ಮೃಗವೆ, ವಿಶ್ವಾಮಿತ್ರನ ಆಶ್ರಮವು ಇಲ್ಲೆಲ್ಲಿರುವುದು?

ಸದಾ—ಇಲ್ಲಿಂದ ಪೂರ್ವ ದಿಕ್ಕಿಗೆ ಒಂದೇ ಉಸುರಿಗೆ ಓಡಿದರೆ ಎಲ್ಲಿಗೆ ಸೇರುವೆಯೋ ಅಲ್ಲಿಯೇ ವಿಶ್ವಾಮಿತ್ರನ ಆಶ್ರಮ!

ಘೃತಾಚೀ—ಅಕ್ಕ! ಅಷ್ಟಕ್ಕೆ ತಿಳಿಯುವುದಿಲ್ಲವೆ? ತರು

ಲತೆಗಳ ಮನೋಹರ ಕಾಂತಿಯನ್ನು ನೋಡಿದರೆ ಇದೇ ತಪೋವನವೆಂದು ಗೊತ್ತಾಗುವುದಿಲ್ಲವೆ ?

ಊರ್ವಶೀ—ಹೌದು. ಹೌದು. ಇದೇ ನಿನ್ನಮನಸ್ಸನ್ನು ಅಪಹರಿಸಿರುವ ವಿಶ್ವಾಮಿತ್ರನ ತಪೋವನ.

ಮೇನಕಾ—ಇದೇ ಅಲ್ಲವೇ ಪುಷ್ಕರ ಸರೋವರ. ಬನ್ನಿ ಈ ಪುಣ್ಯಮಯವಾದ ಪುಷ್ಕರ ತೀರ್ಥದಲ್ಲಿ ಸ್ನಾನ ಮಾಡೋಣ.

ಊರ್ವಶೀ—ಮಹೇಶ್ವರ ! ನಾವು ಹೋಗುವೆವು.

ಸದಾ—ಸರಿ, ಮೆಲ್ಲಮೆಲ್ಲಗೆ ನೋಡಿಕೊಂಡು ಹೋಗಿ. ನಮ್ಮ ಕಡೆ ನೋಡಿದರೆ ಕಣ್ಣು ಕಿವಿಯಾಗುವುದು.

(ಅಪ್ಸರ ಸ್ತ್ರೀಯರೆಲ್ಲರೂ ತೆರಳುವರು)

(ಎದ್ದು ನಿಂತು) ಅಲ್ಲ. ರಾಕ್ಷಸಿಯರಲ್ಲ. ರಾಕ್ಷಸಿಗೆ ಳಾಗಿದ್ದರೆ ಕತ್ತನ್ನು ಮುರಿದು ರಕ್ತವನ್ನು ಹೀರದೆ ಹೋಗುತ್ತಿರಲಿಲ್ಲ. ತಪೋವನದಲ್ಲಿ ಹಲವು ಬಗೆ ಯುವರು ಬಂದು ಹೋಗುತ್ತಿರುವರು. ಈ ಆಭೋಗ ವಿರುವುದರಿಂದಲೇ ರಾಜ್ಯವನ್ನು ಬಿಟ್ಟು ಇಲ್ಲಿರುವನು

(ಸದಾನಂದನು ತೆರಳುವನು)

## ೪. ಪುಷ್ಕರ ಸರೋವರ.

ಮೇನಕೆ ಮುಂತಾದ ಅಪ್ಸರ ಸ್ತ್ರೀಯರ ಜಲವಿಹಾರ.

ಊರ್ವಶೀ—ನೋಡು ವಿಶ್ವಾಮಿತ್ರನು ಬರುತ್ತಿದ್ದಾನೆ

ಅತ್ತ ನೋಡಬೇಡ. ತಿರುಗಿಕೊಂಡು ಸ್ನಾನಮಾಡು. ನಾವೆಲ್ಲರೂ ಸರಿದು ನಿಲ್ಲುವೆವು.

ಘೃತಾಚಿ—ವಿಶ್ವಾಮಿತ್ರನನ್ನು ಮುಗ್ಧನನ್ನಾಗಿ ಮಾಡುವುದಾದರೆ ತನ್ನ ಕತ್ತಿನ ಕಂಠಹಾರವನ್ನು ನಿನಗೆ ಪಾರಿತೋಷಿಕವಾಗಿ ಕೊಡುವೆನೆಂದು ದೇವೇಂದ್ರ ಹೇಳಿರುವನು.

ಮೇನಕಾ—ಸಖಿ! ವಿಶ್ವಾಮಿತ್ರನು ತನ್ನ ಪಾದಗಳಲ್ಲಿ ನನಗೆ ಆಶ್ರಯವನ್ನು ಕೊಡುವುದಾದರೆ, ನಾನು ದೇವರಾಜನ ಸತಿ ಶಚಿಯಾಗುವುದಕ್ಕೂ ಆಸೆಪಡುವುದಿಲ್ಲ. ವಿಶ್ವಾಮಿನ ಗುಣಕೀರ್ತನವನ್ನು ಕೇಳಿ ಮುಗ್ಧಳಾಗಿ ಹೋಗಿರುವೆನು. ನೋಡುನೋಡು. ಅದೆಂತಹ ತೇಜಸ್ವಿ!

ಊರ್ವಶಿ—ನೀನು ಅಪ್ಸರೆಯರ ಹೆಸರನ್ನು ಕೆಡಿಸಿ ಬಿಡುವೆ. ಉದ್ದೇಶವನ್ನು ಸಾಧಿಸಿಕೊಳ್ಳುವುದಕ್ಕೋಸ್ಕರ ಇಲ್ಲಿಗೆ ಸುತ್ತಾಡಲು ಬಂದಿರುವೆ. ನೀನು ದೇವ ಕುಸುಮಗಳಲ್ಲಿ ವಿಹರಿಸುತ್ತಿದ್ದ ಭ್ರಮರಿಯಾಗಿದ್ದು ಮನುಷ್ಯರಲ್ಲಿ ಅನುರಾಗಿಣಿಯಾದುದು ಹೇಗೆ?

ಮೇನಕಾ—ಸಖಿ! ನೀನು ಪ್ರೇಮದ ರುಚಿಯನ್ನರಿಯೆ. ಆದರಿಂದಲೇ ಈ ತರದ ಮಾತುಗಳನ್ನಾಡುತ್ತಿರುವೆ. ಸುರಪುರದಲ್ಲಿ ಅಪ್ಸರ ಸ್ತ್ರೀಯರೆಲ್ಲರೂ ಕಾಮ ಪಿಪಾಸೆಯಿಂದ ಅಲೆಯುವರು. ಭೋಗಾಶರೂ, ಪ್ರೇಮ ಹೀನರೂ ಆದ ದೇವತೆಗಳ ಸೇವೆಯಲ್ಲಿಯೇ ನಾವು

ಕಾಲವನ್ನು ಕಳೆಯಬೇಕಾಗಿರುವುದು. ಅಥವಾ ಪುಣ್ಯ ಬಲದಿಂದ ಮಾನವನು ಯಾವನಾದರೂ ಭೋಗಾಶೆಯನ್ನು ತೀರಿಸಿಕೊಳ್ಳುವುದಕ್ಕೋಸ್ಕರ ಸ್ವರ್ಗಕ್ಕೆ ಬರುವುದಾದರೆ ಅವನ ಸೇವೆಗೂ ನಾವು ಬಾಧ್ಯರಾಗಬೇಕು. ಇದನ್ನೆಲ್ಲಾ ವಿಚಾರ ಮಾಡಿದರೆ ಯಾರಿಗೆ ತಾನೇ ತನ್ನಲ್ಲಿಯೆ ತನಗೇ ತಿರಸ್ಕಾರ ಹುಟ್ಟುವುದಿಲ್ಲ. ಸ್ವರ್ಗ ಸುಖವು ಪ್ರೇಮ ಹೀನವಾದ ಕಾಮಕ್ರಿಯೆಯಲ್ಲವೆಂದು ಹೇಳಬಲ್ಲವರಾರು? ಪ್ರಣಯದ ಪರಿಶುದ್ಧವಾದ ಸುಖವೂ ರುಚಿಯೂ ಹೃದಯದಲ್ಲಿ ತಲೆದೋರುತ್ತಿರುವುವು. ಸಖಿ! ವಿಶ್ವಾಮಿತ್ರನನ್ನು ಪೂಜಿಸಿ ಮನಸ್ಸನ್ನು ಸಮಾಧಾನಗೊಳಿಸುವೆನು.

ಊರ್ವಶೀ—ಸರಿಸರಿ! ಅಕ್ಕಾ! ಗೊತ್ತಾಯಿತು. ನಿನ್ನ ಆಸೆಯನ್ನು ತೀರಿಸಿಕೊ. ನಿನ್ನ ಒಂದು ಕೆಲಸದಲ್ಲಿಯೇ ಎರಡು ಕೆಲಸಗಳೂ ಆಗುವುವು. ನಿನ್ನ ಇಷ್ಟಾರ್ಥವೂ ಕೈಗೂಡುವುದು. ವಿಶ್ವಾಮಿತ್ರನ ತಪೋಭಂಗವೂ ಆಗುವುದು. ದೇವರಾಜನು ನಿನಗೆ ಪುರಸ್ಕಾರವನ್ನೂ ಕೊಡುವನು. ನಾನೂ ನಿನ್ನಂತೆಯೇ ಪ್ರೇಮವನ್ನು ಕಲಿಯಲೆತ್ನಿಸುವೆನು. ಅದರಿಂದ ದೇವರಾಜನ ಪ್ರೀತಿಪಾತ್ರಳಾಗುವುದಕ್ಕೂ ಪ್ರಯತ್ನ ಮಾಡುವೆನು. ನಡೆನಡೆ. ಇಷ್ಟು ಮುಗ್ಧಳಾಗಿ ನೋಡುತ್ತ ನಿಂತರೆ ಯಾವ ಪುರುಷನು ತಾನೆ ನಿನಗೆ ವಶವಾಗುವನು? ಜಲವಿಹಾರದಲ್ಲಿ ನಿನ್ನ ಅನಾವೃತವಾದ ರೂಪರಾಶಿಯನ್ನು ತೋರಿಸು. ಈಗಲೇ ವಿಶ್ವಾ

ಮಿತ್ರನು ನಿನ್ನ ದಾಸನಾಗುವನು. ನಡೆಯಿರಿ. ನಾವೆಲ್ಲರೂ ಹೋಗೋಣ. ಅವಳ ಪ್ರಣಯವು ಸಫಲವಾಗಲಿ.

(ಮೇನಕೆಯನ್ನುಳಿದು ಮತ್ತೆಲ್ಲರೂ ತೆರಳುವರು.)

(ವಿಶ್ವಾಮಿತ್ರನ ಪ್ರವೇಶ.)

ವಿಶ್ವಾ—ನನ್ನ ಕೀರ್ತಿಯ ಪರಿಮಳವು ಲೋಕವನ್ನೆಲ್ಲಾ ವ್ಯಾಪಿಸಿರುವುದು. ವಸಿಷ್ಠನಿಗೆ ನನ್ನಲ್ಲಿ ಅಸೂಯೆಯು ಹುಟ್ಟಿದೆ. ಬ್ರಹ್ಮರ್ಷಿತ್ವವನ್ನು ಹೊಂದಿದೊಡನೆಯೇ 'ನಮೋನಾರಾಯಣಾಯ' ಎಂದು ಅವನ ಮುಂದೆ ನಿಲ್ಲುವೆನು. ಅವನೂ ನಮಸ್ಕಾರ ಮಾಡಬೇಕಾಗುವುದು. ನಾನೆಂತಹ ದೃಢಪ್ರತಿಜ್ಞನೆಂಬುದು ಆಗ ಅವನಿಗೆ ಗೊತ್ತಾಗುವುದು. ನಾನು ಕಾಮನನ್ನು ಜಯಿಸಿರುವೆನು. ಜೊತೆಯಲ್ಲಿ ಸ್ತ್ರೀ ಇದ್ದರೂ ಕಾಮರಹಿತನಾಗಿರುವೆನು. ಈ ಬಾರಿ ಮತ್ತೆ ಘೋರ ತಪಸ್ಸಿಗಾರಂಭ ಮಾಡಿದೊಡನೆಯೇ ಬ್ರಹ್ಮನು ಬ್ರಹ್ಮರ್ಷಿತ್ವವನ್ನು ಕೊಡಲು ಕಟ್ಟು ಬೀಳಬೇಕಾಗುವುದು. (ಹಠತ್ತಾಗಿ ಪುಷ್ಕರನ ಕಡೆತಿರುಗಿ ಮೇನಕೆಯನ್ನು ನೋಡಿ) ಇವಳಾರು? ಯಾರಾದರೇನು? ನಾನು ಸ್ನಾನಮಾಡಿಕೊಂಡು ಹೊರಟು ಹೋಗುವೆನು. ಹೌದು! ಈಕೆಯು ಪರಮ ಸುಂದರಿ! ಇಷ್ಟು ಸುಂದರಿಯಾದ ರಮಣಿಯನ್ನು ನಾನೆಂದೂ ನೋಡಿರಲಿಲ್ಲ. ಒಬ್ಬಂಟಿಗಳಾಗಿ ಪುಷ್ಕರನ ಸ್ನಾನಕ್ಕೆ ಬಂದಿ

ರುವಳು. ಈ ಸುಂದರಿಯು ಯಾರು ? ಯಾರಾದರೂ ಆಗಲಿ. ನಾನು ಸ್ನಾನಮಾಡಿಕೊಂಡು ಹೊರಟು ಹೋಗುವೆನು. ಇದರಿಂದ ನನಗೇನು ಪ್ರಯೋಜನ ? ಇಲ್ಲ. ಪ್ರಶ್ನೆಮಾಡುವುದಿಲ್ಲ. ಯಾರೆಂದು ಕೇಳುವುದಿಲ್ಲ. ಸಮಾಚಾರವೇ ಗೊತ್ತಿಲ್ಲ. ಕೇಳಿದರೆ ತಾನೇ ದೋಷವೇನು. ಎಷ್ಟು ಅಂಗಸೌಷ್ಠವವೋ ಮುಖಮಂಡಲವು ಅಷ್ಟು ಲಾವಣ್ಯಮಯ !

ಮೇನಕೆ—ತೇಜಸ್ವಿಯಾದ ತಾಪಸ ! ದಾಸಿಯು ನಮಸ್ಕಾರವನ್ನು ಸ್ವೀಕರಿಸಬೇಕು.

ವಿಶ್ವಾ—ಎಲೈ ರಮಣಿ ! ನೀನುಯಾರು ? ಎಲೈ ಸುಂದರಿ ! ಹೇಳು. ನೀನಿರುವುದೆಲ್ಲಿ ? ರಾಜರ್ಷಿ ವಿಶ್ವಾಮಿತ್ರನೆಂದು ನನ್ನ ಹೆಸರು.

ಮೇನಕೆ—ದಾಸಿಯ ಹೆಸರು ಮೇನಕೆ. ಎಲೈ ತಪೋಧನನೆ ! ಜಾತಿಯಲ್ಲಿ ಅಪ್ಸರಳು. ಪುಷ್ಕರ ತೀರ್ಥದಲ್ಲಿ ಸ್ನಾನಕ್ಕಾಗಿ ಬಂದಿರುವೆನು. ನನ್ನ ಮನೋರಥವು ಪೂರ್ಣವಾಗುವಂತೆ ಕಿಂಕರಿಗೆ ಆಶೀರ್ವಾದ ಮಾಡಬೇಕು. (ನಮಸ್ಕರಿಸುವಳು) ಅಪ್ಪಣೆಯಾದರೆ ಸುರಪುರಿಗೆ ಹಿಂದಿರುಗುವೆನು.

ವಿಶ್ವಾ—ಸುಂದರಿ ! ನಿನ್ನ ಮುಖವನ್ನು ನೋಡಿದಾಗಿನಿಂದ ಪ್ರೇಮವು ನನ್ನ ಮನಸ್ಸನ್ನು ಸ್ವಾಧೀನಪಡಿಸಿಕೊಂಡಿರುವುದು. ನನ್ನ ಪ್ರಾರ್ಥನೆಗೆ ಕಿವಿಗೊಡು. ನನ್ನ ತಪಃಪ್ರಭಾವದಿಂದ ನಿನ್ನನ್ನು ಪ್ರೀತಿಯಿಂದ

ಅಸಾಧಾರಣವಾದ ವೈಭವದೊಡನೆ ಇಡುವೆನು. ನನ್ನ ಜೊತೆಯಲ್ಲಿ ಬಾ, ನನ್ನನ್ನು ವಂಚಿಸಬೇಡ. ಸಮೀಪದಲ್ಲಿಯೇ ನನ್ನ ಆಶ್ರಮವಿದೆ.

ಮೇನಕೆ—ಪ್ರಭು! ನನ್ನನ್ನು ದೊಡ್ಡ ಸಂಕಟಕ್ಕೆ ಸಿಲುಕಿಸಿರುವಿರಿ. ನಿಮ್ಮ ಮಾತನ್ನು ತಾನೇ ಹೇಗೆ ಮೀರಲಾದೀತು? ಸ್ವರ್ಗಕ್ಕೆನಾನು ಹಿಂದಿರುಗದಿದ್ದರೆ ದೇವರಾಜನು ಕೋಪಿಸಿಕೊಳ್ಳುವನು. ನನ್ನ ಜೊತೆಗಾತಿಯರೆಲ್ಲರೂ ಹಿಂದಿರುಗಿ ಹೊರಟು ಹೋಗಿರುವರು.

ವಿಶ್ವಾ—ಯಾರು? ಇಂದ್ರನೇ? ಯೋಚಿಸಬೇಡ. ನಿನಗೆ ಗೊತ್ತಿರಲಾರದು. ನಾನು ಇಂದ್ರನನ್ನೇ ಸೃಷ್ಟಿ ಮಾಡಿರುವೆನು. ಈ ರಾತ್ರಿಯೇ ತಪಃ ಪ್ರಭಾವವನ್ನು ನಿನಗೆ ತೋರುವೆನು—ಎಂತಹ ಗ್ರಹಗಳನ್ನೂ ನಕ್ಷತ್ರಗಳನ್ನೂ ಸೃಷ್ಟಿ ಮಾಡಿರುವೆನೆಂಬುದನ್ನು ತೋರುವೆನು. ಪ್ರತಿ ನಕ್ಷತ್ರವೂ ಸೂರ್ಯನಂತೆ ತೇಜೋಮಯವಾದದ್ದು. ಆದರಿಂವಲೇ ಬಹಳ ದೂರದಲ್ಲಿರುವುವು. ಆದರಿಂದಲೇ ಬಹು ಸಣ್ಣವಾಗಿ ಕಾಣುವುವು. ನೂತನ ಸ್ವರ್ಗವನ್ನು ಸೃಷ್ಟಿಸಿದವನು ನಾನು. ಇಂದ್ರನಿಗೆ ಭಯಪಡಬೇಡ. ಇಂದ್ರನು ಯಾವಾಗಲೂ ನನ್ನ ಭಯದಿಂದಲೇ ಚಿಂತೆಗೊಳಗಾಗಿರುವನು. ಅವನ ಮಗ್ಗಲಲ್ಲಿಯೇ ಅವನ ಸ್ವರ್ಗದಿಂದ ತಳ್ಳಲ್ಪಟ್ಟ ತ್ರಿಶಂಕುವಿಗೆ ಇಂದ್ರ ಪಟ್ಟವನ್ನು ಕಟ್ಟಿರುವೆನು. ಬಾ. ಬಾ. ಹೋಗೋಣ.

ಮೇನಕೆ—ತಮ್ಮ ಅಪ್ಪಣೆಯನ್ನು ಮೀರಲಾರೆನು.

ವಿಶ್ವಾ—ಮೆಲ್ಲಗೆ ಏಳು. ಕಾಲಿಗೆ ಏನೂ ಚುಚ್ಚಿಕೊಂಡಿಲ್ಲವಷ್ಟೆ. ಇಲ್ಲಿ ಎಲ್ಲೆಲ್ಲಿಯೂ ಕಲ್ಲುಮುಳ್ಳುಗಳು. ನಡೆಯುವಾಗ ಬಹಳ ಕಷ್ಟವಾಗುವುದು. ನಿನ್ನಿಂದ ನಡೆಯಲಾಗದಿದ್ದರೆ, ನೀನು ಒಪ್ಪಿದರೆ ನಿನ್ನನ್ನು ಇಲ್ಲಿಂದ ಆಶ್ರಮಕ್ಕೆ ಎತ್ತಿಕೊಂಡು ಹೋಗಿ ಬಿಡುವೆನು.

ಮೇನಕೆ—ತಾವು ಅಷ್ಟು ದೂರ ನನ್ನನ್ನು ಎತ್ತಿಕೊಂಡು ಹೋಗಬಲ್ಲಿರೋ ಇಲ್ಲವೋ ಎಂದು ಪರೀಕ್ಷೆಮಾಡಲು ನಾನು ಶಕ್ತಳೆ?

ವಿಶ್ವಾ—ತಪ್ಪೇನು? (ಎಂದು ಮುಂದಕ್ಕೆ ಕೈ ಚಾಚುವನು. ಅಷ್ಟರಲ್ಲಿಯೇ ಕೊಂಕುಳಲ್ಲಿ ಬಿಂದಿಗೆಯನ್ನಿಟ್ಟುಕೊಂಡು ಸುನೇತ್ರೆಯು ಬರುವುದನ್ನು ನೋಡಿ) (ಸ್ವಗತ) ಈಗ ಇತ್ತಕಡೆ ಸುನೇತ್ರೆಯು ಬರುತ್ತಿರುವಳಲ್ಲಾ?

ಮೇನಕೆ—ಪ್ರಭು! ಅದೇನನ್ನು ನೋಡುವಿರಿ.

ವಿಶ್ವಾ—ಕೇಳು. ಕೇಳು. ಕೊಂಕುಳಲ್ಲಿ ಬಿಂದಿಗೆಯನ್ನು ಇಟ್ಟುಕೊಂಡು ಬರುವ ಸ್ತ್ರೀಯೊಡನೆ ಈ ಮಾತುಗಳೆಲ್ಲಾ ಹೇಳಿ ಪ್ರಯೋಜನವಿಲ್ಲ. ಅವಳು ನಿನ್ನನ್ನು ಕೇಳಿದರೆ 'ನನ್ನ ಇಷ್ಟಾರ್ಥವು ನೆರವೇರಿತು. ಪುಷ್ಕರ ಸ್ನಾನವನ್ನು ಮಾಡಿಕೊಂಡು ಋಷಿಯ ಸೇವೆಗೆ ಹೋಗುತ್ತಿದ್ದೇನೆ' ಎಂದು ಹೇಳು. ಉಳಿದ ಯಾವ ಮಾತುಗಳನ್ನೂ ಅವಳಲ್ಲಿ ಹೇಳಬೇಡ. ಅವಳು ನನ್ನ ಪತ್ನಿ. ಯುಕ್ತಿಯಿಂದ ಅವಳನ್ನು ನಾನು ಈಗಲೇ

ಸ್ವದೇಶಕ್ಕೆ ಕಳುಹಿಸಿ ಬಿಡುವೆನು. ನಾನು ಹೇಳುವು ದೆಲ್ಲಾ ಯುಕ್ತವೆಂದು ಒಪ್ಪಿಕೋ.

ಮೇನಕಾ—ಪ್ರಭು! ಅವಳು ನನಗೆ ತಪಸ್ವಿನಿಯಾಗಿ ಕಾಣುತ್ತಿರುವಳು. ಅವಳು ನನ್ನ ಮೇಲೆ ಕೋಪಿಸಿ ಕೊಂಡರೆ?

ವಿಶ್ವಾ—ಇಲ್ಲ. ಇಲ್ಲ. ಅವಳಿಗೆ ಈ ಕಥೆಗಳನ್ನೆಲ್ಲಾ ಹೇಳ ಬೇಕೇಕೆ? ನಾನು ಮಾಡುವ ತಂತ್ರವನ್ನು ನೋಡು.

(ಸುನೇತ್ರೆಯ ಪ್ರವೇಶ)

ನೀನು ಮತ್ತೆ ನೀರಿಗೇಕೆ ಹೋಗುವೆ? ನಾನು ಕಮಂಡಲುವಿನಲ್ಲಿಯೇ ನೀರನ್ನು ತರಲು ಹೋಗಿದ್ದೆ ನು. ನನಗೆ ನೀರು ಬೇಕಾಗಿಲ್ಲ.

ಸುನೇತ್ರಾ—ಒಂದು ಬಿಂದಿಗೆ ನೀರನ್ನು ತಂದು ಬಿಡು ವೆನು. ಕಷ್ಟವೇನೂ ಇಲ್ಲ.

ವಿಶ್ವಾ—ನಿನಗೇನೂ ಕಷ್ಟವಿಲ್ಲ. ನನಗೇ ಕಷ್ಟ. ಯೋ ಚಿಸಿ ನೋಡು. ಮಹಾರಾಣಿಯು ತಪೋವನದಲ್ಲಿ ತಪಃ ಕ್ಲೇಶಗಳನ್ನು ಹೀಗೆ ಇನ್ನೆಷ್ಟು ದಿವಸ ಅನು ಭವಿಸಬೇಕು? ನನಗೇನೋ ಒಂದು ವಿಧದಲ್ಲಿ ಕಾ ರ್ಯ ಸಿದ್ಧಿಯಾಗಿಯೇ ಇದೆ. ಇನ್ನು ಕೆಲವು ದಿವಸ ಗಳು ಮಾಡುವುದರೊಳಗಾಗಿ ಬ್ರಹ್ಮರ್ಷಿತ್ವವು ಸಿಕ್ಕಿ ಯೇ ಸಿಕ್ಕುವುದು. ಅದು ದೊರೆತಮೇಲೆಯೇ ನಾನು ರಾಜ್ಯಕ್ಕೆ ಹಿಂದಿರುಗುವೆನು. ನೀನು ಇನ್ನು ಕಷ್ಟಪಡಬೇಕಾದ ಆವಶ್ಯಕತೆಯಿಲ್ಲ. ನೀನು ನನ್ನ

ಸೇವೆಯನ್ನು ಚೆನ್ನಾಗಿಯೇ ಮಾಡಿರುವೆ. ನಾನು ನಿನಗೆ ಪ್ರಸನ್ನನಾಗಿರುವೆನು. (ಮೇನಕೆಯನ್ನು ಕುರಿತು) ಬಾ. ಬಾ. ತಪೋವನವನ್ನುನೋಡೋಣವೆ ಬಾ.

ಸುನೇತ್ರಾ—ಪ್ರಭು ! ಇವಳಾರು.

ವಿಶ್ವಾ—ಇವಳೊಬ್ಬಳು ವಿದೇಶಿಯಾದ ರಮಣಿ. ಜೊತೆಗಾತಿಗಳೊಡನೆ ಪುಷ್ಕರ ಸ್ನಾನಕ್ಕೆ ಬಂದಿದ್ದಳು. ಸ್ನೇಹಿತೆಯರೆಲ್ಲರೂ ಇವಳನ್ನು ಬಿಟ್ಟುಹೊರಟು ಹೋದರು. ಒಬ್ಬಂಟಿಗಳು ವಿಪತ್ತಿಗೆ ಸಿಕ್ಕಿರುವಳು. ಅನಾಥೆ ಆಶ್ರಮದಲ್ಲಿ ಒಂದೆರಡು ದಿನಗಳು ಮಟ್ಟಿಗೆ ಆಶ್ರಯವನ್ನು ಕೋಡೋಣ. ಆಶ್ರಮವೆಂದ ಮೇಲೆ ಅನಾಥೆಯರಿಗೆ ಆಶ್ರಯ ಕೊಡಬೇಕು. ಅಲ್ಲವೇ ? ನೀನೇನು ಹೇಳುವೆ ? (ಮೇನಕೆಯನ್ನು ಕುರಿತು) ಬಾ. ಬಾ. ಯೋಚಿಸಬೇಡ. ಹತ್ತು ಹದಿನೈದು ದಿನಗಳು ಇಲ್ಲಿರಬಹುದು. ತರುವಾಯ ನಿನ್ನ ಜನರು ಬಂದು ನಿನ್ನನ್ನು ಕರೆದುಕೊಂಡು ಹೋಗುವರು. ಬಾ ಬಾ.

ಸುನೇತ್ರಾ—ಪ್ರಭು !....

ವಿಶ್ವಾ—ಏನು ಹೇಳಿದೆ? ನನ್ನ ಸೇವೆಯೇ? ಇವಳೇ ಕೆಲವು ದಿವಸ ನನ್ನ ಸೇವೆಯನ್ನುಮಾಡುವಳು. ಏನು? (ಮೇನಕೆಯನ್ನು ಕುರಿತು) ನೀನು ಮಾಡಲಾರೆಯೊ? (ಆಗುತ್ತದೆಂದು ಹೇಳುವಳು.) ನಾನು ತಪಸ್ವಿ, ನನ್ನ ಸೇವೆಯು ತಾನೆ ಏನು? ಏನೂ ಬೇಕಾಗಿಲ್ಲ.

ನೀನು ವನವಾಸದ ಕ್ಲೇಶವನ್ನು ಇನ್ನು ಅನುಭವಿಸುವುದು ನಾನು ಸಹಿಸಲಾರೆ. ನಿನ್ನ ಕ್ಲೇಶವನ್ನು ನೋಡಿದರೆ ನನ್ನ ತಪಸ್ಸು ಭಂಗವಾಗುವುದು. ನೀನು ಈ ದಿನವೇ ರಾಜಧಾನಿಗೆ ಹೊರಡಲು ಸಿದ್ಧಳಾಗು. (ಮೇನಕೆಯನ್ನುಕುರಿತು) ಏನು ಯೋಚಿಸುವೆ? ಈ ದಿನವೇ ಅವಳನ್ನು ಕಳುಹಿಸಿ ಬಿಡುವೆನು. ನೀನು ನಿಶ್ಚಿಂತಳಾಗಿ ಇರು.

(ಮೇನಕೆಯೂ ವಿಶ್ವಾಮಿತ್ರನೂ ತೆರಳುವರು)

ಸುನೇತ್ರೆ—ಮಹಾತಾಯಿ! ನನ್ನ ಪತ್ನಿಯನ್ನೇಕೆ ಘೋರ ಮಾಯೆಯಲ್ಲಿ ಮುಳುಗಿಸಿರುವೆ? ಏತಕ್ಕೆ? ಜಪತಪಗಳೆಲ್ಲವೂ ನಿಷ್ಫಲವಾದವೆ? ಏನು ಉಪಾಯವನ್ನು ಮಾಡಲಿ? ನಾನೆಂದೆಂದಿಗೂ ಸುಮ್ಮನಿರಲಾರೆ. ನಾನು ಪರ್ಣಶಾಲೆಯನ್ನು ತೊರೆದುಬಿಡುವೆನು. ಆದರೆ ನಾನು ಆತನ ಸಹಧರ್ಮಿಣಿ. ಈ ಘೋರಮಾಯೆಯಿಂದ ಆತನನ್ನು ದೂರಮಾಡುವುದು ನನ್ನ ಕರ್ತವ್ಯ. ಆದರೇನು? ನಾನುಅಬಲೆ. ಕಾರ್ಯಸಿದ್ಧಿಯಾಗುವುದು ಹೇಗೆ? (ಕೈಜೋಡಿಸಿ) ತಾಯೆ! ಭವಾನಿ! ಮಗಳನ್ನು ಕರುಣಿಸಿ ನೋಡು. ಹೇಳು, ಯಾವ ಉಪಾಯದಿಂದ ಪತಿಯನ್ನು ಕಾಮವಿಕಾರದಿಂದ ಉದ್ಧಾರಮಾಡಬೇಕೆಂಬುದನ್ನು ಹೇಳಿಕೊಡು. ಗೊತ್ತಾಯಿತು. ಆವಳು ದೇವತೆಗಳಿಂದ ಕಳುಹಿಸಲ್ಪಟ್ಟವಳು. ಮೋಹಿನಿ. ಮಾಯಾಂಗಣೆ. ನನ್ನ ಪತಿಯನ್ನು ಮುಗ್ಧನನ್ನಾಗಿ ಮಾಡಿಬಿಟ್ಟಿರುವಳು. ರಾಜ್ಯ

ವನ್ನು ತೊರೆದು ಮಾಡಿದ ಈ ಕಠೋರ ತಪಸ್ಸೆಲ್ಲವೂ ವಿಫಲವಾಗಿ ಹೋಗುವುದೇ? ಅಂಬಾ, ಆಶ್ರಿತಳಾದ ಮಗಳಿಗೆ ಪ್ರಸನ್ನಳಾಗು.

## ೪. ವೇದಮಾತೆಯ ಪ್ರವೇಶ.

ವೇದ—ಯಾಕಮ್ಮಾ, ನೀನು ಅನಾಥೆಯಂತೆ ಅಳುತ್ತಿದ್ದೀಯೆ?

ಸುನೇತ್ರೆ—ನೀನು ಯಾರು, ತಾಯಿ?

ವೇದ—ನೀನೇನು ಬಲ್ಲೆ? ನಾನು ಪರಿಚಯವನ್ನು ಹೇಳಿದರೆ ನೀನು ಆಗಲಾದರೂ ಗುರುತು ಹಿಡಿಯಬಲ್ಲೆಯಾ?

ಸುನೇತ್ರೆ—ನೀನಿರುವುದೆಲ್ಲಿ. ತಾಯಿ?

ವೇದ—ನನಗೆ ನಾಲ್ಕು ಮಂದಿ ಮಕ್ಕಳು. ನಾನು ಎಲ್ಲರ ಹತ್ತಿರದಲ್ಲಿಯೂ ಸುತ್ತಾಡುತ್ತಿರುವೆನು. ನನ್ನ ಮಕ್ಕಳಿಗೆ ಬಹಳ ಹೆಂಗರುಳು. ಅವರನ್ನು ನಂಬಿದವರಿಗೆ ಕೆಡಕಾಗುವುದೇ ಇಲ್ಲ. ಅವರ ಮಾತನ್ನು ನಂಬಿ ಕೆಟ್ಟವರಿಲ್ಲ. ಕುಟಿಲರಾದವರು ಕುಟಿಲಭಾವನೆಗಳಿಂದ ಇತರರನ್ನು ಬೈಯ್ಯುತ್ತಾರೆ. ಸುಳ್ಳು ಹೇಳುತ್ತಾರೆ.

ಸುನೇತ್ರೆ—ತಾಯಿ! ನಿನ್ನ ಮಕ್ಕಳೇನು ಮಾಡುವರು.

ವೇದ—ಲೋಕಕ್ಕೆ ಸದುಪದೇಶ ಮಾಡುವುದು, ಒಳ್ಳೆಯ ಬುದ್ಧಿಯನ್ನು ಕಲಿಸುವುದು ಅವರ ಮುಖ್ಯವಾದ ಕೆಲಸ. ಈಗ ಕಲಿಯುವವರು ಯಾರು? ಸುಖ

ಭೋಗಗಳ ಆಸೆಯೇ ಎಲ್ಲೆಲ್ಲಿಯೂ ತುಂಬಿ ಹೋಗಿದೆ; ಸದ್ಬುದ್ಧಿಯನ್ನು ಕಲಿಯುವುದು ಯಾರಿಗೆ ತಾನೇ ಬೇಕಾಗಿದೆ? ಹೇಳು.

ಸುನೇತ್ರೆ—ಅವರೇನು ಮಾಡಬಲ್ಲರು?

ವೇದ—ಅವರು ಗಾನ ಮಾಡುತ್ತಾರೆ. ಕೆಲಸಗಳನ್ನು ಮಾಡುವ ರೀತಿಯನ್ನು ಹೇಳುತ್ತಾರೆ. ಮಂತ್ರಗಳನ್ನು ಸೂಚಿಸುತ್ತಾರೆ. ಹೋಮ ಮಾಡುವುದನ್ನು ಹೇಳಿ ಕೊಡುತ್ತಾರೆ.

ಸುನೇತ್ರೆ—ನಿನ್ನ. ಮಕ್ಕಳ ಹೆಸರನ್ನು ಹೇಳು. ನಾನು ಅವರಿರುವಲ್ಲಿಗೆ ಹೋಗುತ್ತೇನೆ.

ವೇದ—ಋಕ್, ಯಜು, ಸಾಮ, ಅಥರ್ವ ಎಂದು ನನ್ನ ನಾಲ್ವರು ಮಕ್ಕಳ ಹೆಸರು. ಅವರಿರುವಲ್ಲಿಗೆ ಏಕೆ ಹೋಗಬೇಕೆನ್ನುವೆ? ಅಲ್ಲಿ ಹೋಗಿ ಏನು ಮಾಡುವೆ?

ಸುನೇತ್ರೆ—ನನ್ನ ಪತಿಯ ಮನಸ್ಸು ಮಲಿನವಾಗಿ ಹೋಗಿದೆ. ಯಾವ ಪ್ರಾಯಶ್ಚಿತ್ತವನ್ನು ಮಾಡಿದರೆ ಆ ಮಾಲಿನ್ಯವು ಹೋಗುವುದೆಂಬುದನ್ನು ಅವರಿಂದ ಕಲಿಯುವೆನು. ನಾನು ಅತನ ಸಹಧರ್ಮಿಣೀ. ನಾನಾವ ಪ್ರಾಯಶ್ಚಿತ್ತವನ್ನು ಕೈಗೊಂಡರೆ ನನ್ನ ಪತಿಯು ಈ ಮೋಹದ ಕೈಯಿಂದ ಬಿಡುಗಡೆಯನ್ನು ಹೊಂದುವನು?

ವೇದ—ಇದಕ್ಕಾಗಿ ಅವರಿರುವಲ್ಲಿಗೆ ಹೋಗಬೇಕೇ? ನಾನೇ ಹೇಳುತ್ತೇನೆ ಕೇಳು. ನಾನೇ ಎಲ್ಲವನ್ನೂ ಬಲ್ಲೆ.

ಸುನೇತ್ರೆ—ತಾಯಿ ! ಹಾಗಾದರೆ ಹೇಳು. ನಿರ್ಮಲ ಚಿತ್ತನಾದ ನನ್ನ ಸ್ವಾಮಿಯ ಮನಸ್ಸು ಏಕೆ ಮಲಿನವಾಯಿತು ?

ವೇದ—ತಾಯಿ ! ಕೇಳು. ಪಾಪಕ್ಕೆ ಸಹಾಯ ಹೆಚ್ಚು. ಅದಕ್ಕೆ ಮುಖ್ಯ ಸಹಾಯ ಐಶ್ವರ್ಯ. ಎಲ್ಲಾ ತರದ ಐಶ್ವರ್ಯವೂ ಇದಕ್ಕೆ ಸಹಾಯ. ಎಲ್ಲಕ್ಕಿಂತಲೂ ಹೆಚ್ಚಾದುದು ಯೋಗೈಶ್ವರ್ಯ. ಉಚ್ಚ ಹೃದಯವನ್ನೂ ಅದು ಕದಲಿಸಬಲ್ಲದು. ಈ ಯೋಗೈಶ್ವರ್ಯದಿಂದಲೇ ನಿನ್ನ ಸ್ವಾಮಿಯು ಈ ಸ್ಥಿತಿಗೆ ಬಂದಿರುವುದು. ಅವನ ಮನಸ್ಸಿನಲ್ಲಿ ಅಹಂಕಾರವು ತಲೆದೋರಿದೆ. ಅವನು ಕಾಮವನ್ನು ಜಯಿಸಿದ ಮಹಾಪುರುಷ. ಇತರರ ಅಹಂಕಾರವನ್ನು ಅಡಗಿಸದೆ ಇರಲಾರ. ಅದರಿಂದಲೇ ಅವನು ಕೆಡುವುದು. ನೀನು ಇದಕ್ಕಾಗಿ ಚಿಂತಿಸಬೇಡ. ಅವನು ಆಶ್ರಯಿಸಿದವರನ್ನು ರಕ್ಷಿಸುವನು. ಆ ಪುಣ್ಯ ಪ್ರಭಾವದಿಂದ ಯೋಗಸಿದ್ಧನಾಗುವನು. ನೀನು ಅವನ ಅರ್ಧಾಂಗಿ, ನಿನ್ನ ಪವಿತ್ರವಾದ ತಪೋಬಲದಿಂದ ಅವನೂ ಶುದ್ಧನಾಗುವನು. ಕೇಳು.-ಆಸೆಯು ಭೋಗಾನುಭವವಿಲ್ಲದಿದ್ದರೆ ಪೂರ್ಣವಾಗುವುದಿಲ್ಲ. ಎಲ್ಲಕ್ಕೂ ಕಾಲವು ಬೇಕು. ನಿನ್ನ ಸ್ವಾಮಿಯು ಎಷ್ಟುದಿನ ಭೋಗರತನಾಗಿರುವನೋ ಅಷ್ಟುದಿನ ನೀನು ನಿರ್ಜನವಾದ ಪ್ರದೇಶದಲ್ಲಿ ಕುಳಿತು ದುರ್ಗಾದೇವಿಯನ್ನು ಪೂಜಿಸುತ್ತಿರು.

ಸುನೇತ್ರೆ—ದುರ್ಗಾ ಪೂಜೆಯನ್ನು ಹೇಗೆ ಮಾಡಬೇಕೆಂಬುದೇ ನನಗೆ ತಿಳಿಯದು. ತಾಯಿ! ನೀನು ಹೇಳಿ ಕೊಡಲಾರೆಯಾ?

ವೇದ—ಇನ್ನೇನು ಹೇಳಿಕೊಡಲಿ? ದುರ್ಗಾ ಪೂಜೆಯು ಬಹಳ ಸುಲಭವಾದದ್ದು. ಭಕ್ತಿಯಿಂದ ದುರ್ಗೆಯ ನಾಮವನ್ನು ಹೇಳುವುದೇ, ದೇವಿಗೆ ಪ್ರಿಯವಾದ ಆರಾಧನೆ. ಬಾ. ನಿನ್ನನ್ನು ನಿರ್ಜನವಾದ ಪ್ರದೇಶಕ್ಕೆ ಕರೆದುಕೊಂಡು ಹೋಗುತ್ತೇನೆ.

ಸುನೇತ್ರೆ—ನನ್ನ ಕಾರ್ಯವು ಕೈಗೂಡಿತೆಂದು ತಿಳಿಯುವುದು ಹೇಗೆ? ನನ್ನ ಸ್ವಾಮಿಯ ಮನೋಮಾಲಿನ್ಯವು ಹೋಗಿರುವುದೆಂದು ನನಗೆ ಗೊತ್ತಾಗುವ ಬಗೆ ಯಾವುದು?

ವೇದ—ಅಗ್ನಿಯು ನಿನಗೆ ಪ್ರತ್ಯಕ್ಷನಾಗಿ ಬಂದು ಹೇಳುವನು. ಎಂದು ಅಗ್ನಿಯು ನಿನ್ನ ಸ್ವಾಮಿಯು ಕೊಟ್ಟ ಹವಿಸ್ಸನ್ನು ಸ್ವೀಕರಿಸುವನೋ ಅಂದು ಅವನು ಶುದ್ಧನಾದನೆಂದು ತಿಳಿ.

ಸುನೇತ್ರೆ—ತಾಯಿ! ಆ ರಮಣೀಯು ಯಾರು? ಅದೇಕೆ ಅವಳು ನನ್ನ ಪತಿಯ ಮನಸ್ಸು ಮಲಿನವಾಗುವಂತೆ ಮಾಡಿದಳು?

ವೇದ—ಅವಳ ಹೆಸರು ಮೇನಕೆ. ಅವಳು ಅಪ್ಸರ ಸ್ತ್ರೀ. ಇಂದ್ರನ ಅಪ್ಪಣೆಯಂತೆ ಮನ್ಮಥನು ಮೇನಕೆಯು ನಿನ್ನ ಪತಿಯಲ್ಲಿ ಅನುರಕ್ತಳಾಗುವಂತೆ ಮಾಡಿದ್ದಾನೆ.

ಸುನೇತ್ರೆ—ದೇವತೆಗಳೂ ಈ ಬಗೆಯ ಹೀನವಾದ ಕೆಲಸಗಳನ್ನು ಮಾಡುವುದುಂಟೆ?

ವೇದ—ಮಗಳೆ! ಸಂಸಾರವೆಂಬ ಮಹಾ ಮಾಯೆಯಿಂದ ನಡೆಯುತ್ತಿರುವ ಈ ಕರ್ಮ ಕ್ಷೇತ್ರದಲ್ಲಿ ಧಾರ್ಮಿಕರಾದ ರಾಜರಿರಬೇಕು. ಮೇನಕೆಯಲ್ಲಿ ನಿನ್ನ ಸ್ವಾಮಿಯ ಸಹಾಯದಿಂದ ಒಬ್ಬಳು ಕನ್ಯೆಯು ಹುಟ್ಟುವಳು. ಅವಳ ಮಗನೇ ಭರತ. ಅವನು ತನ್ನ ಪುಣ್ಯಬಲದಿಂದ ಈ ಧರ್ಮ ಕ್ಷೇತ್ರವನ್ನು ಭಾರತವರ್ಷವೆಂದು ಜಗದ್ವಿಖ್ಯಾತವಾಗುವಂತೆ ಮಾಡುವನು. ನಡೆ. ಹೋಗೋಣ.

ಸುನೇತ್ರೆ—ನೀನಾರು ತಾಯಿ?

ವೇದ—ನಾನು ಯಾರಾದರೇನು? ಅದರ ವಿಚಾರವು ಈಗ ಬೇಕಾಗಿಲ್ಲ. ನೀನು ದುರ್ಗಾ ಪೂಜೆಯನ್ನು ಮಾಡು.

(ಇಬ್ಬರೂ ಹೊರಡುವರು.)

### ೫. ವಸಿಷ್ಠರ ಆಶ್ರಮ.

ವಸಿಷ್ಠ ಮತ್ತು ಅರುಂಧತಿ.

ವಸಿಷ್ಠ—ಸಾಧ್ವಿ! ಘೋರವಾದ ದುಃಖವನ್ನು ಸಹಿಸಿಕೊಳ್ಳಲು ಸಿದ್ಧಳಾಗು. ಬಹಳ ಘೋರವಾದ ದುಃಖ! ಇದರಿಂದ ಆತ್ಮಹತ್ಯವನ್ನು ಮಾಡಿಕೊಳ್ಳಬೇಕೆಂಬ ಬುದ್ಧಿಯು ಹುಟ್ಟಬಹುದು. ಆದರೆ ನಿನ್ನ ಪತಿಯು

ಪಾಪಮುಕ್ತನೆಂಬ ಸಮಾಧಾನವನ್ನು ಮಾತ್ರ ಹೇಳ ಬಲ್ಲೆ. ಕಾಮಧೇನುವಿನಲ್ಲಿದ್ದ ಆಸೆಯಿಂದ ಕ್ರೋಧಕ್ಕೆ ತುತ್ತಾಗಿ ಬ್ರಹ್ಮತೇಜಸ್ಸನ್ನು ಉಪಯೋಗಿಸಿ ವಿಶ್ವಾಮಿತ್ರನ ನೂರು ಮಂದಿ ಮಕ್ಕಳನ್ನೂ ಕೊಂದಿದ್ದೆನು. ಈ ಜನ್ಮದಲ್ಲಿಯೇ ಅದರ ಫಲವನ್ನು ಅನುಭವಿಸಿದ್ದರಿಂದ ನಾನು ಆ ಮಹಾ ಪಾಪದಿಂದ ಮುಕ್ತನಾದೆನು. "ತಾಯಿ! ಜಗದೀಶ್ವರಿ! ಅಸಾಧಾರಣವಾದ ಮೋಹಬಂಧನದಿಂದ ಜೀವಗಳನ್ನು ಕಟ್ಟಿಹಾಕಿರುವೆ. ಮಮತೆಯನ್ನು ದೂರಮಾಡಿ ಹೃದಯ ತಂತಿಯನ್ನು ಕತ್ತರಿಸಿಹಾಕಿ, ಕಾಪಾಡು. ದೇವಿ! ನಿನ್ನ ಈ ಸಂಸಾರ, ಈ ಅಧಿಕಾರ, ನಿನ್ನ ಇಚ್ಛೆ—ಇವೆಲ್ಲವೂ ಪೂರ್ಣವಾಗುವುವು. ತಾಯಿ! ಈ ದೇಹಬಂಧನವನ್ನು ಛೇದಿಸಿ ಆತ್ಮನು ಮುಕ್ತನಾಗುವಂತೆಮಾಡು." ಅಯ್ಯೋ! ಎಂತಹ ಘೋರವಾದ ಪೆಟ್ಟು.

ಅರುಂಧತಿ—ಪ್ರಭು! ಪ್ರಭು! ಹೇಳಿ. ಅದಾವ ಭಯಂಕರವಾದ ವಿಪತ್ತಿನ ಚಂಡ ಮಾರುತವು ಪ್ರವಹಿಸಲಾರಂಭಿಸಿರುವುದು? ಮೇರುವಿನಂತೆ ಅಚಲವಾದ ಹೃದಯವನ್ನೂ ಕಂಪಿಸುವಂತೆ ಮಾಡಿರುವ ಆ ವಿಪತ್ತಾವುದು? ನನ್ನ ಮನಸ್ಸು ಸಂದೇಹಪರಂಪರೆಗಳಿಂದ ಚಂಚಲವಾಗಿ ಹೋಗಿದೆ. ಹೇಳಿ. ಬೇಗ ಹೇಳಿ. ಮನಸ್ಸಿನಲ್ಲಿ ಏನೋ ಒಂದು ಉರಿಯೆದ್ದಂತಾಗಿದೆ.

ವಸಿಷ್ಠ—ಸಾಧ್ವಿ! ಅತ್ತುಬಿಡು. ರೋದನವೊಂದೇ

ಮನಸ್ಸಿಗೆ ಸಮಾಧಾನವನ್ನು ಕೊಡಬಲ್ಲುದು. ಈ ಘೋರಯಾತನೆಗೆ ಬೇರೆ ಸಮಾಧಾನವಿಲ್ಲ.

ಅರುಂಧತಿ—ಪ್ರಭು ! ಹೇಳಿ. ಬೇಗ ಹೇಳಿಬಿಡಿ. ಏನೋ ಭಯ ! ಏನೋ ಸಂಕಟ ! ನಮ್ಮ ಶಕ್ತ್ರಿಯು ಸುಖವಾಗಿರುವನಷ್ಟೆ ? ನಮ್ಮ ಮಾತನ್ನು ಮೀರಿ ಯಾವುದೋ ವಿಷಘಳಿಗೆಯಲ್ಲಿ ಪ್ರಯಾಣ ಮಾಡಿದನಲ್ಲಾ ?

ವಸಿಷ್ಠ—ಜೀವಕ್ಕೆ ಪ್ರಾರಬ್ಧಕರ್ಮವೇ ಬಲವಾದ ಕಟ್ಟು. ಶಕ್ತ್ರಿಯು ನಿನ್ನ ಮಾತನ್ನು ಮೀರಿ ಹೋಗಲಿಲ್ಲ. ಪ್ರಾರಬ್ಧವು ಅವನನ್ನು ವಿಷಘಳಿಗೆಯಲ್ಲಿ ಸೆಳೆದುಕೊಂಡು ಹೋಯಿತು.

ಅರುಂಧತಿ—ಅವನಿಗೆ ಏನಾದರೂ ಕೆಡಕು ಸಂಭವಿಸಿತೆ?

ವಸಿಷ್ಠ—ಅವನು ಈಗ ಸಂಸಾರದ ಮಂಗಳ ಅಮಂಗಳಗಳಿಗೆ ಅತೀತನಾಗಿದ್ದಾನೆ. ಸಾಂಸಾರಿಕ ಶುಭಾಶುಭಗಳು ಅವನನ್ನು ಮುಟ್ಟಲಾರವು.

ಅರುಂಧತಿ—ಪ್ರಭು ! ಹಾಗಾದರೆ ನಮ್ಮ ಶಕ್ತ್ರಿಯು ಇಲ್ಲವೆ ?

ವಸಿಷ್ಠ—ಇನ್ನು ನಮಗಿಲ್ಲ. ಪ್ರಾರಬ್ಧವು ಗೊತ್ತುಮಾಡಿದ ಸ್ಥಾನಕ್ಕೆ ಹೊರಟು ಹೋಗಿದ್ದಾನೆ.

ಅರುಂಧತಿ—ಹಾ ಜಗದೀಶ್ವರಿ ! ಏನು ಮಾಡಿಬಿಟ್ಟೆ ? ಏನಾಗಿ ಹೋಯಿತು ? ಈ ಸಹಿಸಲಾಗದ ದುಃಖದಿಂದ ಪಾರಾಗುವುದು ಹೇಗೆ ? ಉಳಿಯುವುದು ಸಾಧ್ಯವೆ ?

ವಸಿಷ್ಠ—ಸಾಧ್ವಿ! ಕಲ್ಲಿನಹಾಗಿರಬೇಕು. ಸಂಸಾರವು ದುಃಖಕ್ಕೆ ತೌರುಮನೆ. ಶೋಕತಾಪಗಳೇ ಸಂಸಾರದ ಶಿಕ್ಷಾಗುರುಗಳು. ಸಂಸಾರದಲ್ಲಿ ಆಸೆಯು ಹೆಚ್ಚಿದಹಾಗೆಲ್ಲಾ ಶಿಕ್ಷಣಕ್ರಮವೂ ಕಠಿಣವಾಗುವುದು. ಇನ್ನೂ ಭಯಂಕರವಾದ ವಿಷಯವನ್ನು ಕೇಳಲು ಮನಸ್ಸನ್ನು ಬಿಗಿಹಿಡಿ.

ಅರುಂಧತಿ—ನಮ್ಮ ಉಳಿದ ಮಕ್ಕಳೆಲ್ಲಿರುವರು?

ವಸಿಷ್ಠ—ಪಾಪದ ಪರಿಣಾಮವೂ ಪ್ರಕೃತಿನಿಯಮಗಳಿಗನುಸಾರವಾದುದೇ. ಬ್ರಹ್ಮತೇಜಸ್ಸನ್ನು ಸರಿಯಲ್ಲದ ರೀತಿಯಲ್ಲಿ ಉಪಯೋಗಿಸಿದ್ದರಿಂದ ಅದು ನಮ್ಮನ್ನೇ ಸುಟ್ಟುಬಿಟ್ಟಿತು. ವಿಶ್ವಾಮಿತ್ರನಿಗೆ ವಿರೋಧವಾಗಿ ನಾನು ಬ್ರಹ್ಮತೇಜಸ್ಸನ್ನು ದುರ್ವ್ಯಯ ಮಾಡಿದೆ. ಇದರಿಂದ ನಿನ್ನ ಮಗನು ತ್ರಿಶಂಕು ಮಹಾರಾಜನಿಗೆ ಶಾಪವನ್ನು ಕೊಟ್ಟನು. ರಾಜಾ ಕಲ್ಮಾಷಪಾದನಿಗೆ ಶಾಪವನ್ನು ಕೊಟ್ಟು ತಾನೂ ನಾಶವಾದನಲ್ಲದೆ ತನ್ನ ಒಡಹುಟ್ಟಿದವರ ನಾಶಕ್ಕೂ ದಾರಿಮಾಡಿದನು. ರಾಜಾಕಲ್ಮಾಷಪಾದನು ಶಕ್ತಿಯ ಶಾಪದಿಂದ ರಾಕ್ಷಸನಾಗಿ ಎಲ್ಲರನ್ನೂ ತಿಂದುಬಿಟ್ಟನು.

ಅರುಂಧತಿ—ಪ್ರಭು! ಪ್ರಭು! ಆಶ್ರಿತಳಿಗೆ ತಮ್ಮ ಪಾದತಳದಲ್ಲಿ ಆಶ್ರಯವನ್ನು ಕೊಟ್ಟು ಸಲಹಬೇಕು. ಯೋಗಶಕ್ತಿಯ ಬಲದಿಂದ ನಮ್ಮ ಮಕ್ಕಳೆಲ್ಲರೂ ಪುನರುಜ್ಜೀವಿತರಾಗುವಂತೆ ತಾವು ಮಾಡಬೇಕು.

ನೀವು ಮನಸ್ಸು ಮಾಡಿದರೆ ಯಮರಾಜನು ಎಂದಿಗೂ ಆವರನ್ನು ತನ್ನ ರಾಜ್ಯಕ್ಕೆ ಕರೆದೊಯ್ಯಲಾರನು. ಅವರು ಮತ್ತೆ ಶರೀರವನ್ನು ಪಡೆದರೆ ಅಮ್ಮಾ ಎಂದು ನನ್ನನ್ನು ಹುಡುಕಿಕೊಂಡು ಬಂದೇ ಬರುವರು.

ವಸಿಷ್ಠ—ಸಾಧ್ವಿ ! ನನ್ನ ಮನಸ್ಸಿನಲ್ಲಿ ಆಸೆಯು ತಲೆದೋರುವಂತೆ ಮಾಡಬೇಡ. ಪ್ರಕೃತಿ ನಿಯಮಗಳಿಗೆ ವಿರುದ್ಧವಾಗಿ ಶಕ್ತಿಯನ್ನು ಉಪಯೋಗಿಸುವಂತೆ ನನಗೆ ಉಪದೇಶ ಮಾಡಬೇಡ. ನಿಜ, ಬ್ರಹ್ಮಶಕ್ತಿ ಬಲದಿಂದ ನಾನು ಅವರನ್ನು ಮತ್ತೆ ಇಲ್ಲಿಗೆ ತರಬಲ್ಲೆ. ವಿಶ್ವನಿಯಮವನ್ನೇ ಬದಲಾಯಿಸ ಬೇಕಾಗುವುದು. ಸೃಷ್ಟಿಸ್ಥಿತಿ ಲಯಗಳನ್ನು ನಡೆಸಿ ಕಲ್ಪಕಲ್ಪಗಳಲ್ಲಿಯೂ ಹಿತಕರವೆಂದು ವ್ಯಕ್ತವಾಗಿರುವ ಆ ನಿಯಮವು ವ್ಯತ್ಯಾಸವಾಗುವಂತೆ ಮಾಡಬೇಕಾಗುವುದು.

ಅರುಂಧತಿ—ಆ ರಾಕ್ಷಸನು ಈಗ ಎಲ್ಲಿರುವನು? ಅವನನ್ನು ಕೊಂದುಹಾಕಿದರೆ ನನ್ನ ಯಾತನೆಯು ಸ್ವಲ್ಪ ಮಟ್ಟಿಗೆ ಕಡಿಮೆ ಯಾಗುವುದು.

ವಸಿಷ್ಠ—ಇಲ್ಲಾ! ಹಾಗೆಮಾಡಲಾರೆ. ಕಲ್ಮಾಷಪಾದನ ಶಾಪವಿಮೋಚನೆಯನ್ನು ಮಾಡಿ ಬ್ರಾಹ್ಮಣನ ಬ್ರಾಹ್ಮಣತ್ವದ ತತ್ವವು ಈ ಲೋಕದಲ್ಲಿ ಪ್ರಚಾರಿತವಾಗುವಂತೆ ಮಾಡಬೇಕು. ಬ್ರಾಹ್ಮಣನು ಎಂತಹ ಕಠೋರ ನಿಯಮಾಧೀನನಾಗಿದ್ದಾನೆ! ಭೋಗಸುಖಗಳನ್ನು ಬಿಟ್ಟು ಹಗಲು ರಾತ್ರಿ ಇಂತಹ ಕಠೋರ

ತಪಸ್ಸನ್ನು ಮಾಡುವುದೇ ಅವನ ಕರ್ತವ್ಯ! ತನಗೆ ಅನಿಷ್ಟವನ್ನೇ ಕೋರುವ ಶತ್ರುವಿನಲ್ಲಿಯೂ ಇಂತಹ ದಯೆಯನ್ನು ತೋರುವುದೇ ಅವನ ಯೋಗಸಾಧನೆ. ಅಂತಹ ಕ್ಷಮಾಶೀಲತೆಯೇ ಬ್ರಾಹ್ಮಣನ ಬ್ರಾಹ್ಮಣತ್ವ! ಇವೆಲ್ಲವೂ ಇತರ ವರ್ಣಾಶ್ರಮದವರಿಗೆ ತಿಳಿದರೆ ಆವರೆಂದಿಗೂ ಬ್ರಾಹ್ಮಣರಾಗಬೇಕೆಂದು ಆಸೆ ಪಡುವುದಿಲ್ಲ. ನಾನು ಬ್ರಾಹ್ಮಣ. ಅದೃಷ್ಟಫಲದಿಂದ ಬ್ರಹ್ಮರ್ಷಿತ್ವವನ್ನೂ ಪಡೆದದ್ದಾಯಿತು. ಕ್ಷಮೆಯೊಂದೇ ನನ್ನ ಬಲ. ವಿಶ್ವಾಮಿತ್ರನೊಡನೆ ಹೋರಾಡುತ್ತಿದ್ದಾಗ ನೀನೇ ಈ ಕ್ಷಮಾಶಿಕ್ಷಣವನ್ನು ನನಗೆ ಕೊಟ್ಟಿರುವೆ. ಈಗ ಈ ಬಗೆಯ ಉಪದೇಶದಿಂದ ನನ್ನ ಬ್ರಹ್ಮಶಕ್ತಿಯು ಕಳೆಗುಂದುವಂತೆ ಮಾಡಬೇಡ. ಮನಸ್ಸು ಅತಿ ಚಂಚಲವಾದದ್ದು. ಪುತ್ರಶೋಕದಿಂದಲೂ ನಿನ್ನ ಉತ್ತೇಜನೆಯಿಂದಲೂ ನಾನು ಉತ್ತೇಜಿತನಾಗಲಾರೆ. ಧೈರ್ಯದಿಂದ ಮನಸ್ಸನ್ನು ಬಿಗಿಹಿಡಿ. ಪರಮ ಶತ್ರುಗಳಾಗಿದ್ದರೂ ಅವರಿಗೆ ಕೆಟ್ಟದ್ದನ್ನು ಹಾರೈಸದಿರು. ನಿನ್ನ ಮಾತಿನಂತೆ ಬ್ರಹ್ಮತೇಜಸ್ಸನ್ನು ಬಿಗಿಹಿಡಿದಿದ್ದರಿಂದ ವಂಶವು ಉಳಿದುಕೊಂಡಿತು. ಪಿತೃಗಳಿಗೆ ಪಿಂಡೋದಕಗಳಿಗೆ ಅಡ್ಡಿಯಿಲ್ಲದಂತಾಯಿತು. ಸೊಸೆಯು ಬಸುರಿ. ನಿನ್ನ ಪುಣ್ಯಬಲದಿಂದ ಅವಳ ಹೊಟ್ಟೆಯಲ್ಲಿ ಮಹರ್ಷಿಯು ಹುಟ್ಟುವನು. ನಾನು ಘೋರತಪಸ್ಸು ಮಾಡಲಾರಂಭಿಸುವೆನು. ನೀನು ನನ್ನ ಸಹಧರ್ಮಿಣೀ. ಬಾ. ನನಗೆ ಸಹಾಯಮಾಡು.

ಅರುಂಧತಿ—ಪ್ರಭು ! ತಮ್ಮ ಮಾತನ್ನು ಶಿರಸಾ ವಹಿಸಿದೆನು. ಆದರೂ ಪುತ್ರಶೋಕದಿಂದ ಮನಸ್ಸು ಬಹಳ ಕಾತರ ಪಡುತ್ತಿರುವುದು.

(ಅದೃಶ್ಯಂತಿಯು ಓಡಿಬರುವಳು.)

ಅದೃಶ್ಯಂತಿ—ತಂದೆ! ಕಾಪಾಡು ! ಕಾಪಾಡು ! ಈ ರಾಕ್ಷಸನು ನನ್ನನ್ನು ತಿನ್ನಬೇಕೆಂದು ಅಟ್ಟಿ ಬರುತ್ತಿದ್ದಾನೆ. ಕಾಪಾಡು ! ಕಾಪಾಡು !

(ರಾಕ್ಷಸವೇಷದಿಂದ ಕಲ್ಮಾಷಪಾದನು ಬರುವನು.)

ಕಲ್ಮಾಷಪಾದ—ವಸಿಷ್ಠ ! ನಿಲ್ಲು. ನಿನ್ನ ನೂರುಮಂದಿ ಮಕ್ಕಳನ್ನೂ ತಿಂದದ್ದಾಯಿತು. ನಿನ್ನನ್ನೂ ತಿನ್ನುತ್ತೇನೆ. ನಿನ್ನ ಹೆಂಡತಿಯನ್ನೂ ತಿಂದುಬಿಡುವೆನು. ನಿನ್ನ ಸೊಸೆಯನ್ನೂ ಬಿಟ್ಟೇನೇ? (ಹಾ ಹಾ ಹಾ ಎಂದು ನಗುವನು.)

ವಸಿಷ್ಠ—ರಾಜಾ ಕಲ್ಮಾಷಪಾದ ! ನನ್ನ ವಾಕ್ಯದಿಂದ ನಿನಗೆ ಬ್ರಹ್ಮಶಾಪ ವಿಮೋಚನೆಯಾಗಲಿ. ದುರಂತನಾದ ಕಿಂಕರನೆಂಬ ರಾಕ್ಷಸನ ಪ್ರಭಾವವು ನಿನ್ನನ್ನು ಬಿಟ್ಟು ಹೋಗಲಿ ! ನಿನ್ನ ಪೂರ್ವರೂಪವು ಬರಲಿ ! (ಎಂದು ತನ್ನ ಕಮಂಡಲದಿಂದ ನೀರನ್ನು ತೆಗೆದು ರಾಜನಮೇಲೆ ಚಿಮುಕಿಸುವನು )

ಕಲ್ಮಾಷಪಾದ —(ಮೊದಲಿನಂತೆ ರಾಜರೂಪವನ್ನು ಹೊಂದಿ) ಇದೇನು ? ನನಗೇನು ಪಿಶಾಚಿಯು ಹಿಡಿ

ದಿದ್ದಿತೆ? ಅಯ್ಯಾಬ್ರಾಹ್ಮಣ! ತಪೋಧನ! ನೀನೇ ಧನ್ಯ. ಜಗತ್ತಿನಲ್ಲಿ ಬ್ರಾಹ್ಮಣನೇ ಪ್ರತ್ಯಕ್ಷ ದೇವತೆ! ಈಶ್ವರನ ಕ್ಷಮಾಶಕ್ತಿಯೇ ಬ್ರಾಹ್ಮಣನ ರೂಪದಿಂದ ಜಗತ್ತಿನಲ್ಲಿ ಅವತರಿಸಿರುವುದು! ಬ್ರಾಹ್ಮಣ! ನಿನ್ನ ಪಾದಸ್ಪರ್ಶದಿಂದಲೇ ಈ ಪೃಥ್ವಿಯು ಪವಿತ್ರವಾಯಿತು! ಕ್ಷಮಾಗುಣದಿಂದಲೇ ನೀನು ಮೂರು ಲೋಕಗಳಿ. ಪೂಜ್ಯನಾಗಿ ದೇವತೆಗಳ ಪ್ರೀತಿಗೆ ಪಾತ್ರನಾಗಿರುವೆ. ನೀನೇ ಸೃಷ್ಟಿಶಕ್ತಿಯಿಂದ ಬ್ರಹ್ಮನಿಗೂ ಪಾಲನ ಶಕ್ತಿಯಿಂದ ವಿಷ್ಣುವಿಗೂ, ಸಂಹಾರ ಶಕ್ತಿಯಿಂದ ಮಹಾದೇವನಾದ ಈಶ್ವರನಿಗೂ ಸಮನಾಗಿರುವೆ. ಆದರೆ ನಿನ್ನ ಕ್ಷಮಾಶಕ್ತಿಯನ್ನು ಹೋಲುವುದು ಎಲ್ಲಿಯೂ ಇಲ್ಲ. ವಸಿಷ್ಠದೇವ! ಬ್ರಹ್ಮವಿದ್ ಬ್ರಾಹ್ಮಣ! ನಿನ್ನ ಪಾದಗಳಿಗೆ ಸಾವಿರ ನಮಸ್ಕಾರಗಳು ಈ ದಾಸನು ರಾಕ್ಷಸ ಪ್ರಕೃತಿಯಿಂದ ಮಾಡಿದ ನರಹತ್ಯೆ ಮುಂತಾದ ಪಾಪಗಳಿಂದ ಮುಕ್ತನಾಗುವುದು ಹೇಗೆಂಬುದನ್ನು ದಯವಿಟ್ಟು ತಿಳಿಸು. ನಿನ್ನ ನೂರುಮಂದಿ ಮಕ್ಕಳನ್ನೂ ಕೊಂದೆನು. ಈ ಅನುತಾಪದಿಂದ ನನ್ನ ಹೃದಯವು ಸುಡುತ್ತಿರುವುದು. ಈ ಅನುತಾಪಾನಲವು ಶೀತಲವಾಗುವುದು ಹೇಗೆ?

ವಸಿಷ್ಠ—ಮಹಾರಾಜ! ಯೋಚಿಸಬೇಡ. ಸಮಸ್ತ ತೀರ್ಥ ಕ್ಷೇತ್ರಗಳಲ್ಲಿಯೂ ಸಿದ್ಧಾಶ್ರಮಗಳಲ್ಲಿಯೂ ಸಂಚರಿಸಿ ನಿನ್ನ ರಾಜ್ಯಕ್ಕೆ ಹಿಂದಿರುಗು. ನೀನು ಪಾಪ ಮುಕ್ತನಾಗುವೆ. ಕೊನೆಯಲ್ಲಿ ನಿನಗೆ ವೈಕುಂಠವೂ ಲಭಿಸುವುದು.

ಕಲ್ಮಾಷಪಾದ—ದಯಾಮಯ ! ನೀನೇ ಧನ್ಯ ! ಜಯ ವಾಗಲಿ. ವಸಿಷ್ಠನಿಗೆ ಜಯವಾಗಲಿ.

(ಎಲ್ಲರೂ ತೆರಳುವರು)

## ೬. ವನ.

(ಹೋಮ ಮಾಡುತ್ತಾ ಸುನೇತ್ರೆಯು ಕುಳಿತಿರುವಳು.)

ಸುನೇತ್ರೆ—ಎಲ್ಲಿ ! ಅಗ್ನಿಯು ಪ್ರತ್ಯಕ್ಷವಾಗಲೇ ಇಲ್ಲ ! ಇರಲಿ. ನಾನು ನನ್ನ ಪತಿಯ ಅರ್ಧಾಂಗಿ. ಈ ಹೋಮಕುಂಡದಲ್ಲಿರುವ ಅಗ್ನಿಗೆ ಈ ನನ್ನ ದೇಹ ವನ್ನು ಆಹುತಿಯಾಗಿ ಸಮರ್ಪಿಸುವೆನು. ಇದರಿಂದ ನನ್ನ ದೇಹವು ಪವಿತ್ರವಾಗುವುದು. ಆಗ ನನ್ನ ಪತಿಯದೇಹವು ಅಪವಿತ್ರವಾಗಿರುವುದು ಸಾಧ್ಯವಿಲ್ಲ. ನನ್ನ ಪತಿಯ ಕೆಲಸವನ್ನು ಸಾಧಿಸಲರಿಯದ ಈ ದೇಹ ವಿದ್ದೇನು ಪ್ರಯೋಜನ? ಅಗ್ನಿ ಪ್ರವೇಶವನ್ನು ಮಾಡು ವೆನು. ಎಲೈ ಅಗ್ನಿಯೆ ! ನಿನ್ನ ಮಗಳ ದೇಹವನ್ನು ನಿನ್ನ ಪವಿತ್ರವಾದ ಮುಖದಿಂದ ಸ್ವೀಕರಿಸು.

(ಅಗ್ನಿಪ್ರವೇಶವನ್ನು ಮಾಡಲು ಮುಂದೆ ಬಾಗುವಷ್ಟ ರಲ್ಲಿಯೇ ಆಗ್ನಿಯು ಪ್ರತ್ಯಕ್ಷನಾಗುವನು.)

ಅಗ್ನಿ—ತಾಯೆ ! ನಿನ್ನ ಕೆಲಸವು ಕೈಗೂಡಿತು. ನಾನು ನಿನ್ನ ಪತಿಯು ಹೋಮ ಮಾಡುವಾಗ ಪ್ರತ್ಯಕ್ಷನಾಗಿ ಹವಿಸ್ಸನ್ನು ಸ್ವೀಕರಿಸುವೆನು. ನೀನು ಮತ್ತೆ ನಿನ್ನ ಪತಿಯ ಹತ್ತಿರಕ್ಕೆ ಹಿಂದಿರುಗಬೇಡ. ನಿನ್ನ ಪತಿಯ ರಾಜ್ಯಕ್ಕೆ ಹಿಂದಿರುಗಿ ಎಲ್ಲವನ್ನೂ ಬ್ರಾಹ್ಮಣರಿಗೆ ದಾನಮಾಡು. ಪೃಥ್ವಿಯಲ್ಲಿ ಯಾವ ರಮಣಿಯು

ನಿನ್ನಂತೆ ಪತಿಯ ಸದುದ್ದೇಶ ಸಾಧನೆಗೆ ಸಹಾಯ ಮಾಡುವಳೋ ಅವಳೇ ಭಾಗ್ಯವತಿ.

ಸುನೇತ್ರೆ—ದೇವ! ಈ ದಾಸಿಯು ಕೃತಾರ್ಥಳಾಗುವಂತೆ ಮಾಡಿದೆ. ಮಹಾರಾಜನ ಮಗನಾದ ಮಧುಷ್ಯಂಧನು ವಯಸ್ಸಿನಲ್ಲಿ ಬಹಳ ಚಿಕ್ಕವನಾದರೂ ರಾಜ್ಯಕ್ಕೆ ಅವನೇ ಅಧಿಕಾರಿ. ಆ ರಾಜ್ಯವನ್ನು ನಾನು ದಾನ ಮಾಡುವುದು ಹೇಗೆ?

ಅಗ್ನಿ—ನಿನ್ನ ಮಗನು ಈಗ ರಾಜಪುತ್ರನಲ್ಲ—ಋಷಿಪುತ್ರ. ವಿದ್ಯಾಭ್ಯಾಸಕ್ಕಾಗಿ ಅವನು ಋಚೀಕನ ಮಗ ಜಮದಗ್ನಿಯ ಹತ್ತಿರಕ್ಕೆ ಹೋಗಿರುವನು. ಋಚೀಕನು ನಿನ್ನ ನಾದಿನಿಯ ಮಗ. ವಿದ್ಯಾಭ್ಯಾಸವು ಮುಗಿದ ಮೇಲೆ ಆತನನ್ನು ನನ್ನ ಹತ್ತಿರಕ್ಕೆ ಕರೆಸಿಕೊಂಡು ಬ್ರಹ್ಮಜ್ಞಾನವನ್ನು ಉಪದೇಶಿಸುವೆನು. ರಾಜ್ಯವನ್ನು ದಾನ ಮಾಡಲು ನಿನಗೆ ಸಂಪೂರ್ಣ ಅಧಿಕಾರವುಂಟು. ನಿನ್ನ ಮಗನಿಂದ ಮುಂದೆ ಕ್ಷತ್ರಿಯ ಕುಲವು ಉದ್ಧಾರವಾಗುವುದು.

ಸುನೇತ್ರೆ—ತಂದೆಯೇ! ಕ್ಷತ್ರಿಯ ಕುಲವು ಮುಂದೆ ಏಕೆ ನಾಶವಾಗಬೇಕು? ನನ್ನ ಮಗನು ಮುಂದೆ ಅದನ್ನು ರಕ್ಷಿಸುವುದುತಾನೇ ಹೇಗೆ? ದೇವ! ತಿಳಿಯದ ಮಗಳಿಗೆ ತಿಳಿವಳಿಕೆಯನ್ನು ಕೊಟ್ಟು ಸಲಹಬೇಕು.

ಅಗ್ನಿ—ಜಮದಗ್ನಿಯ ಮಗನು ಪರಶುರಾಮ. ಕ್ಷತ್ರಿಯರಿಂದ ಬ್ರಾಹ್ಮಣ ಕುಲಕ್ಕೆ ಮುಂದೆ ತೊಂದರೆಯುಂ

ಟಾಗುವುದು. ರೋಷದಿಂದ ಪರಶುರಾಮನು ಇಪ್ಪತ್ತೊಂದು ಬಾರಿ ಪೃಥ್ವಿಯಲ್ಲಿ ಕ್ಷತ್ರಿಯರೇ ಇಲ್ಲದಂತೆ ಮಾಡುವನು. ನಿನ್ನ ಮಗನು ಋಷಿತ್ವವನ್ನು ಹೊಂದಿ ಕ್ಷತ್ರಿಯ ಕುಲವನ್ನು ಕಾಪಾಡುವನು. ಸ್ವಜನ ಪ್ರೇಮದಿಂದ ಪರಶುರಾಮನು ನಿನ್ನ ಮಗನ ಮಾತನ್ನು ಮೀರಲಾರದೆ ಒಬ್ಬಿಬ್ಬರು ಕ್ಷತ್ರಿಯರನ್ನು ಉಳಿಸುವನು.

ಸುನೇತ್ರೆ—ಬ್ರಾಹ್ಮಣರ ವಂಶದಲ್ಲಿ ಇಂತಹ ಕ್ಷತ್ರಿಯ ಧರ್ಮವನ್ನು ಕೈಗೊಳ್ಳುವ ಮಗನು ಏಕೆ ಹುಟ್ಟುವನು ?

ಅಗ್ನಿ—ಮಗಳೆ! ಚರುವಿನ ವಿನಿಮಯದಿಂದ ಹೀಗಾಗುವುದು. ಈ ವಿಚಾರವೆಲ್ಲವೂ ನಿನಗೆ ಮುಂದೆ ತಿಳಿಯುವುದು. (ಅಗ್ನಿಯು ಕಾಣಿಸದೇ ಹೋಗುವನು.)

ಸುನೇತ್ರೆ—ತಂದೆಯೆ ! ನಿನ್ನಡಿಗೆರಗುವೆನು. (ಎಂದು ತೆರಳುವಳು)

## ೭. ವಿಶ್ವಾಮಿತ್ರನ ಆಶ್ರಮ.

(ವಿಶ್ವಾಮಿತ್ರನು ಬರುವನು.)

ವಿಶ್ವಾಮಿತ್ರ—ಹೌದು. ಅವಳು ತುಂಬಿದ ಬಸುರಿ. ಅವಳಿಗೆ ಸಹಾಯ ಮಾಡಲು ಮತ್ತಾವ ಹೆಂಗಸರೂ ಇಲ್ಲ. ಅದರಿಂದ ನಾನೇ ಅವಳ ಸಹಾಯಕ್ಕೆ ನಿಂತಿದ್ದೇನೆ. ಕೆಲವು ಕಾಲ ಧ್ಯಾನಾದಿಗಳನ್ನು ನಿಲ್ಲಿಸಿಬಿಡುವೆನು.

(ಮೇನಕೆಯು ಬರುವಳು.)

ಮೇನಕೆ—ಇದೇನು? ನೀನು ಮಲಗಿಕ್ಕೊಳ್ಳದೆ ಇಲ್ಲಿಗೇಕೆ ಬಂದೆ? ಪ್ರಸವ ಕಾಲವು ಸಮೀಪಿಸಿದೆ. ಯಾವುದಾದರೂ ಮರದ ನೆರಳಿನಲ್ಲಿ ಸಂಕಟವನ್ನು ಪರಿಹಾರಮಾಡಿಕೊಳ್ಳುತ್ತೇನೆ.

ವಿಶ್ವಾಮಿತ್ರ—ಅದೇಕೆ? ಆಶ್ರಮವನ್ನು ಬಿಟ್ಟು ಮರದಡಿಗೇಕೆ ಹೋಗಬೇಕು? ಬೇಡ- ಬೇಡ. ಆಶ್ರಮವನ್ನು ಬಿಟ್ಟು ಹೊರಡಬೇಡ.

ಮೇನಕೆ—ಏನೆಂದೆ? ತಪೋವನವು ಅಪವಿತ್ರವಾಗುವುದಿಲ್ಲವೆ?

ವಿಶ್ವಾಮಿತ್ರ—ಅಪವಿತ್ರವೆ? ಚೊಕ್ಕಟವಾಗಿ ತೊಳೆದರೆ ಎಲ್ಲವೂ ಪವಿತ್ರವಾಗುವುದು. ನಡೆ ನಡೆ. ಆಶ್ರಮಕ್ಕೆ ನಡೆ. ಸೂತಿಕಾಗೃಹಕ್ಕೆ ಅವಶ್ಯಕವಾದ ಕಾಷ್ಠಾದಿಗಳನ್ನು ಕೂಡಿಸಿಕೊಂಡು ಬರುವೆನು. ನಡೆ.

ಮೇನಕೆ—ಕಾಷ್ಠಾದಿಗಳ ಆವಶ್ಯಕತೆಯೇನು? ನಾವು ಅಪ್ಸರ ಸ್ತ್ರೀಯರು. ಮನುಷ್ಯರಂತೆ ಹೆರಿಗೆಯ ಸಂಕಟವನ್ನು ನಾವು ಅನುಭವಿಸುವುದಿಲ್ಲ.

ವಿಶ್ವಾಮಿತ್ರ—ಹಾಗೂ ಆಗಲಿ. ಈಗ ಆಶ್ರಮಕ್ಕೆ ನಡೆ. ಸುಖವಾಗಿ ಮಲಗಿಕೊ, ನಡೆ. (ಮೇನಕೆಯು ಹೊರಟು ಹೋಗುವಳು) ಬಹಳ ಸಂಕಟ ಪಡುತ್ತಿರುವಳು. ಏನೂ ತಿಳಿಯದ ಹೆಣ್ಣು ಹೆಂಗಸು. ಒಂದೂ ಗೊತ್ತಿಲ್ಲ. ಪ್ರಸವ ಕಾಲವು ಸ್ತ್ರೀಯರಿಗೆ

ಬಹಳ ಸಂಕಟ ಸಮಯ. ಅದಾರು ಬರುತ್ತಿರುವವರು? ಸೂತಿಕಾಗೃಹದಲ್ಲಿ ನನ್ನೀ ಪ್ರಿಯ ರಮಣಿಗೆ ಸಹಾಯ ಮಾಡಲು ಯಾರಾದರೂ ಸ್ತ್ರೀಯರು ದೊರಕುವರೆ? ಎಂದು ಇವನನ್ನು ಕೇಳುವೆನು. (ತೆರೆಯ ಕಡೆ ನೋಡಿ) ಓಹೋ! ಅದೇ ಹುಡುಗ.

(ಬ್ರಹ್ಮಣ್ಯದೇವನು ಬರುವನು)

ಏನೋ ಹುಡುಗಾ! ಬಹಳ ದಿನಗಳಿಂದ ನಿನ್ನನ್ನು ನೋಡಲೇ ಇಲ್ಲ. ಅದೇನು ನೀನು ಈಗ ಬಂದದ್ದು?

ಬ್ರಹ್ಮಣ್ಯ—ಏನೋ ಬಂದೆ. ಅದೇನು ನಿನ್ನ ಮೈಯೆಲ್ಲಾ ದುರ್ವಾಸನೆ ಮುದಿಕುರಿಯ ಮೈಯ ಹಾಗೆ?

ವಿಶ್ವಾಮಿತ್ರ—ಇದೇನಿದು? ನಾನು ಮೈಗೆಲ್ಲಾ ಗಂಧವನ್ನು ಲೇಪಿಸಿಕೊಂಡಿದ್ದೇನೆ. ನೀನು ಮಾತ್ರ ದುರ್ವಾಸನೆ ಎನ್ನುತ್ತೀಯೆ?

ಬ್ರಹ್ಮಣ್ಯ—ಮೈಗೆ ಗಂಧವನ್ನು ಲೇಪಿಸಿಕೊಂಡಿದ್ದೀಯೆ. ಆದರೆ ಮನಸ್ಸು ಮಾತ್ರ ಮಲ ಮೂತ್ರಗಳಲ್ಲಿ ಮುಳುಗಿ ತೇಲಾಡುತ್ತಿದೆ. ನಿನ್ನ ರಾಜ್ಯಕ್ಕೆ ಹಿಂದಿರುಗಿ ಹೊರಟುಹೋಗು- ನಡೆ. ಮೊದಲು ಹೊರಡು. ತಪಸ್ವೀ ಎಂದು ಯಾಕೆ ಬೂಟಾಟಿಕೆ ವೇಷವನ್ನು ಹಾಕಿ ಕೊಂಡಿದ್ದೀಯೆ? ನನಗೆ ಈ ಬೂಟಾಟಿಕೆ ಅಭ್ಯಾಸವಿಲ್ಲ. ಕಪಟಿಗಳನ್ನುಕಂಡರೆ ನನಗೆಆಗುವುದಿಲ್ಲ.

ವಿಶ್ವಾಮಿತ್ರ—ಏನು? ನಾನು ಕಪಟಿಯೆ?

ಬ್ರಹ್ಮಣ್ಯ—ಹಾಗಾದರೆ ಮತ್ತಾರು ಕಪಟಿಗಳು? ರಾಜ

ನಾಗಿದ್ದರೆ, ರಾಜ್ಯದಲ್ಲಿದ್ದುಕೊಂಡು ಸಾವಿರಾರು ಮಂದಿ ಸ್ತ್ರೀಯರನ್ನು ಕೂಡಿದರೂ ಯಾರೂ ಏನು ಹೇಳುತ್ತಿರಲಿಲ್ಲ. ಈಗ ತಪಸ್ವಿಯಾಗಿದ್ದೀಯೆ. ಆಶ್ರಮದಲ್ಲಿ ವಾಸ ಮಾಡುತ್ತಿದ್ದೀಯೆ. ಹೆರಿಗೆಗೆ ಬೇಕಾದ ಸಲಕರಣೆಗಳನ್ನು ಒದಗಿಸಿಕೊಳ್ಳಲು ಅಲೆದಾಡುತ್ತಿದ್ದೀಯೆ. ನೀನೆಂದು ಬ್ರಹ್ಮರ್ಷಿಯಾಗುತ್ತೀಯೋಪ್ಪಾ !

ವಿಶ್ವಾಮಿತ್ರ—ಏನು ? ಏನು ? ಏನೆಂದೇ ಹುಡುಗಾ ? ಹೌದು- ಹೌದು. ಏನಾಗಿ ಹೋಯಿತು ? ನಾನು ಹೇಗಿದ್ದೆ ? ಏನಾಗಿ ಹೋದೆ? ನಾನು—ಆ ನಾನು-- ಸ್ತ್ರೀಪ್ರಣಯದಲ್ಲಿ ಸಿಕ್ಕಿಬಿದ್ದು ನನ್ನ ಲಕ್ಷ್ಯವನ್ನು ಮರೆತುಬಿಟ್ಟೆನಲ್ಲಾ ! ಲೋಕದಲ್ಲಿ ಎಲ್ಲರ ಅಪಹಾಸ್ಯಕ್ಕೂ ಗುರಿಯಾದೆನಲ್ಲಾ! ನನ್ನ ಸಂಕಲ್ಪವು ಭಂಗವಾಗಿ ಹೋಯಿತು. ಧನ, ಜನ, ರಾಜ್ಯ, ಇವೆಲ್ಲವನ್ನೂ ತೊರೆದು ಬಂದು ಅಡವಿಯಲ್ಲಿ ಸಂಸಾರಿಯಾಗಿದ್ದೇನೆ.

ಬ್ರಹ್ಮಣ್ಯ—ಒಂದು ರೀತಿ ನೋಡಿದರೆ ಇದು ಅಷ್ಟೇನೂ ಕೆಟ್ಟಿಲ್ಲ. ನಿನಗೆ ಈಗ ಸುಸಂತಾನವೂ ಆಗುವುದು. ಬದುಕಿದ್ದರೆ ಅನ್ನಪ್ರಾಶನದ ಏರ್ಪಾಡೂ ನಡೆಯುತ್ತದೆ. ಹತ್ತಾರು ಮಂದಿ ಋಷಿಗಳೂ ಬರುತ್ತಾರೆ. ನಾನೂ ಬಂದು ಫಲಾಹಾರ ಮಾಡಿಕೊಂಡು ಹೋಗುತ್ತೇನೆ. ನಿನ್ನ ತಪೋಬಲದಿಂದ ಯಾವುದಕ್ಕೂ ಏನೂ ಕಡಿಮೆಯಿಲ್ಲ. ನೀನು ಮನಸ್ಸಿನಲ್ಲಿ ಯೋಚ

ಸಿದ ಹಾಗೆಯೇ ಎಲ್ಲಾ ನಡೆಯುತ್ತದೆ. ಹಿಂದೆ ನೀನು ಸೊಗಸಾದ ಫಲಮೂಲಗಳನ್ನು ಸೃಷ್ಟಿಮಾಡಿದೆ. ಅಂದವಾದ ಹೊಸ ಹೂವುಗಳನ್ನು ಮಾಡಿದೆ. ಹಾಗೆಯೇ ರುಚಿರುಚಿಯಾದ ಮೃಷ್ಟಾನ್ನಗಳನ್ನು ಸೃಷ್ಟಿಮಾಡು. ನಾವೆಲ್ಲರೂ ಬಂದು ಫಲಾಹಾರ ಮಾಡಿ ನಿನ್ನ ಮಗುವಿಗೆ ಆಶೀರ್ವಾದ ಮಾಡಿ ಹೋಗುತ್ತೇವೆ.

ವಿಶ್ವಾಮಿತ್ರ—ಅಯ್ಯಾ ಹುಡುಗ! ಕಣ್ತೆರೆದು ನೋಡುವಂತೆ ಮಾಡಿದೆ. ನೀನು ಯಾರು? ಮೋಹವೆಂಬ ಕತ್ತಲೆಯಲ್ಲಿ ಅಲೆಯುತ್ತಿದ್ದ ನನಗೆ ಬೆಳಕನ್ನು ತಂದು ದಾರಿಯನ್ನು ತೋರಿಸಲು ಬಂದೆಯಾ?

ಬ್ರಹ್ಮಣ್ಯ—ನಾನು ಯಾರು? ನಾನು ಯಾರು? ಸರಿ. ನೀನು ಯಾರು ಎಂಬುದನ್ನು ಮೊದಲು ತಿಳಿದುಕೊ. ಆಮೇಲೆ ನಾನಾರೆಂಬುದನ್ನು ತಿಳಿದುಕೊಳ್ಳುವೆ. ತನ್ನನ್ನೇ ತಾನರಿಯ. ಕೊಂಚಕಾಲ ಕಣ್ಣು ಮುಚ್ಚಿಕ್ಕೊಂಡು ಧ್ಯಾನಮಾಡಿ ಯೋಗಶಕ್ತಿಯನ್ನು ಸಂಪಾದಿಸಿಕೊಂಡು ಜಂಭ ಮಾಡಿಕೊಂಡು ಇವನು ಯಾರು? ಅವನು ಯಾರು? ಎಂದರೆ ಎಲ್ಲಾ ಗೊತ್ತಾದೀತೆ? ತನ್ನನ್ನು ತಾನೇ ಅರಿಯ. ಉಳಿದವರನ್ನು ತಿಳಿಯುವುದು ಹೇಗೆ? ಈ ಮುದಿ ಮನುಷ್ಯನಿಗೆ ಬುದ್ಧಿಯಿಲ್ಲ. (ಬ್ರಹ್ಮಣ್ಯದೇವನು ಕಾಣಿಸದೆ ಹೋಗುವನು.)

ವಿಶ್ವಾಮಿತ್ರ—ನಾನು ಮೋಹದಿಂದ ಕುರುಡನಾಗಿದ್ದೇ

ನೆಯೇ? ಈ ಹುಡುಗನೇ ನನ್ನ ಇಷ್ಟದೇವತೆ. ನನ್ನಲ್ಲಿ ಕರುಣವಿಟ್ಟು ದರ್ಶನವನ್ನು ಕೊಟ್ಟಿರುವನು. ನಾನೂ ಸಾವಿರಾರು ವರುಷ ತಪಸ್ಸು ಮಾಡಿದ್ದೇನೆ. ನನಗೆ ಗಡ್ಡ ಮೀಸೆಗಳು ನರೆತು ಹೋಗಿವೆ. ಆ ಬಾಲಕನ ಮೋಹನ ಮೂರ್ತಿಯನ್ನು ನೋಡಿದ್ದಾಯಿತು. ಈಗಲೂ ಆ ಮೂರ್ತಿ ಕಣ್ಣಿಗೆ ಕಟ್ಟಿದಹಾಗಿದೆ. ಇಷ್ಟಾದರೂ ಅವನಾರೆಂದು ಗುರ್ತು ಹಿಡಿಯಲಾಗಲಿಲ್ಲ. ನಾನೇನಾಗಿ ಹೋದೆ? ಏನು ಮಾಡಿಬಿಟ್ಟೆ? ತಪಸ್ಸು ಮಾಡುವುದಕ್ಕೆ ಬಂದು ನಾರಿಯರ ಪ್ರೇಮಕ್ಕೆ ತುತ್ತಾದೆನಲ್ಲಾ? (ಹೆಣ್ಣು ಮಗುವನ್ನು ಕೈಯಲ್ಲಿ ತೆಗೆದುಕೊಂಡು ಮೇನಕೆಯು ಬರುವಳು)

ಮೇನಕೆ—ನಾವು ಅಪ್ಸರ ಸ್ತ್ರೀಯರೆಂದು ಮೊದಲೇ ಹೇಳಿದೆ. ನೀನೇನೋ ಬಹಳವಾಗಿ ಯೋಚಿಸುತ್ತಿದ್ದೆ. ನೋಡು. ಎಷ್ಟು ಚೆಲುವಾದ ಹೆಣ್ಣು ಮಗು! ಚಂದ್ರನಂತಿರುವ ಮುಖದಲ್ಲಿ ಎಂತಹ ಮಧುರವಾದ ಕಿರುನಗೆ! ಮುಖಭಾವವು ನಿನ್ನ ಮುಖವಂತೆಯೇ ಇದೆ. ನೋಡು. ನಿನ್ನನ್ನೇ ರೆಪ್ಪೆಯಿಕ್ಕದೆ ನೋಡುತ್ತಿದೆ. ಒಂದು ಸಾರಿ ಎತ್ತಿಕೊಂಡು ನೋಡು. ಎಂತಹ ದುಃಖವಿದ್ದರೂ ಮನಸ್ಸು ಶಾಂತವಾಗುವುದು. ಎತ್ತಿಕೋ.

ವಿಶ್ವಾ—(ಮುಖವನ್ನು ತಿರುಗಿಸಿಕೊಂಡು) ಸುಂದರಿ! ನಿಮ್ಮೂರಿಗೆ ಹಿಂದಿರುಗು. ಮತ್ತೆ ನಾನು ನಾಚಿಕೆ ಪಟ್ಟುಕೊಳ್ಳುವಂತೆ ಮಾಡಬೇಡ. ಇಂದ್ರನ ಸಂಕ

ಲ್ಪವು ನೆರವೇರಿತು. ನನ್ನನ್ನು ಮರಳು ಮಾಡಲು ನಿನ್ನನ್ನು ಕಳುಹಿಸಿದ್ದನು. ಇಂದ್ರಿಗೆ ಆ ಕೆಲಸವು ಕೈಗೂಡಿತು.

ಮೇನಕೆ—ಪ್ರಭು! ನಾನು ತಪ್ಪು ಮಾಡಿದವಳಲ್ಲ. ನಾನು ತಮ್ಮನ್ನು ಮರಳು ಮಾಡಲು ಬಂದವಳೂ ಅಲ್ಲ. ಇಂದ್ರನು ನನ್ನನ್ನು ಕಳುಹಿಸಲೂ ಇಲ್ಲ. ನಾನು ನಿನ್ನ ಸದ್ಗುಣಗಳನ್ನು ಕೇಳಿ ಮುಗ್ಧಳಾಗಿ ನಿನ್ನ ಸೇವೆಗಾಗಿ ಪುಷ್ಕರಕ್ಕೆ ಬಂದೆನು.

ವಿಶ್ವಾ—ಸುಂದರಿ! ತಿಳಿಯಿತು. ಇಂದ್ರನ ಅಪ್ಪಣೆಯಂತೆ ಮನ್ಮಥನು ನಿನಗೆ ತಿಳಿಯದಂತೆ ನಿನ್ನ ಹೃದಯದಲ್ಲಿ ಪ್ರೇಮಾನುರಾಗಗಳು ತಲೆದೋರುವಂತೆ ಮಾಡಿದನು. ಹೋಗು-ಹೋಗು. ನಿನಗೆ ಮಂಗಳವಾಗಲಿ. ನಿನ್ನ ಮಗಳನ್ನೆತ್ತಿಕೊಂಡು ನಡೆ.

(ನಮಸ್ಕಾರ ಮಾಡಿ ಮಗಳನ್ನೆತ್ತಿಕೊಂಡು ಮೇನಕೆಯು ಹೊರಟುಹೋಗುವಳು.)

ಧನ್ಯ! ಧನ್ಯ! ಮನ್ಮಥ! ನಿರಾಹಾರ, ಕಠೋರ ತಪಸ್ಸು, ಇವುಗಳಿದ್ದರೂ ಮನ್ಮಥ! ನಿನ್ನನ್ನು ಋಷಿಗಳೂ ಗೆಲ್ಲಲಾರರು. ನನ್ನ ಸೊಕ್ಕಡಗಿತು. ವಿಶ್ವಾಮಿತ್ರನು ಕಾಮಾಸಕ್ತನೆಂಬ ಅಪಕೀರ್ತಿಯು ಬಂದಿತು. ಇರಲಿ. ಇಂದಿನಿಂದ ಇದೇ ನನ್ನ ಸಂಕಲ್ಪ. ಎಂತಹ ವಿಘ್ನಗಳು ಬಂದರೂ ಅವುಗಳಿಗೆ ಸಗ್ಗದೆ ಈ ಶರೀರವು ಪತನವಾದರೂ ಹೆದರದೆ ಘೋರ ತಪ

ಸ್ಸನ್ನು ಮಾಡುವೆನು. ಮತ್ತೆ ಪ್ರತಿಜ್ಞಾ ಭಂಗಕ್ಕೆ ಅವಕಾಶ ಕೊಡುವುದಿಲ್ಲ. ಈ ಸ್ಥಳವನ್ನೂ ಬಿಟ್ಟು ಬಿಡುವೆನು. ಈ ತೀರ್ಥದ ಗೌರವವನ್ನೂ ಕಾಪಾಡಲರಿಯದೆ ಹೋದೆ. ಎಂದೆಂದೂ ಮಂಜು ಮುಸುಕಿರುವ ಹಿಮಾಲಯ ಪರ್ವತದ ಮೇಲೆ ಏಕಾಂತದಲ್ಲಿ ಬ್ರಹ್ಮ ಧ್ಯಾನವನ್ನು ಮಾಡುವೆನು. ಕಾರ್ಯಸಾಧನೆಯಾಗಬೇಕು. ಇಲ್ಲದಿದ್ದರೆ ಈ ದೇಹವು ನಾಶವಾಗಬೇಕು. ಇನ್ನು ಪ್ರತಿಜ್ಞಾಭಂಗವೆಲ್ಲಿ ಬಂತು ?

(ವಿಶ್ವಾಮಿತ್ರನು ತೆರಳುವನು)

---

## ನಾಲ್ಕನೆಯ ಅಂಕ.

---

### ೧. ಸ್ವರ್ಗ.

ಇಂದ್ರ ಮತ್ತು ರಂಭೆ.

ರಂಭೆ—ದೇವರಾಜ! ದಾಸಿಯನ್ನೇಕೆ ನೆನೆಸಿಕೊಳ್ಳೋಣವಾಯಿತು ?

ಇಂದ್ರ—ರಂಭೆ ! ಕೇಳು. ವಿಶ್ವಾಮಿತ್ರನಿಗೆ ಇಂದ್ರತ್ವವು ಬರುವುದಾದರೆ ಮೂರು ಲೋಕಗಳೂ ನಾಶವಾಗುವುವು. ಆತನು ಸುಮೇರು ಪರ್ವತದ ಶಿಖರದಲ್ಲಿ ಘೋರ ತಪಸ್ಸಿನಲ್ಲಿ ಮಗ್ನನಾಗಿದ್ದಾನೆ. ಆತನ ತಪಸ್ಸು ಭಂಗವಾಗುವಂತೆ ಮಾಡುವುದು ಅವಶ್ಯಕ.

ಇಲ್ಲದಿದ್ದರೆ ತಪೋಜ್ವಾಲೆಯಿಂದ ಲೋಕಗಳೆಲ್ಲ ಸುಟ್ಟುಹೋಗುತ್ತವೆ. ಈ ಭಯಂಕರನಾದ ಋಷಿಯು ಯಾವ ವರವನ್ನು ಬೇಡುವನೋ ಯಾರಿಗೆ ಗೊತ್ತು ? ಎಲೈ ಲತಾಂಗಿ ! ಬೇಗ ಹೋಗು. ನಿನ್ನ ಕಡೆಗಣ್ಣಿನ ನೋಟದ ಬಾಣದಿಂದ ಅವನ ಧ್ಯಾನವು ಭಂಗವಾಗುವಂತೆ ಮಾಡು. ದೇವತೆಗಳ ಕಾರ್ಯವನ್ನು ಸಾಧಿಸು.

ರಂಭೆ—ದೇವರಾಜ ! ವಿಶ್ವಾಮಿತ್ರನ ಹೆಸರನ್ನೆತ್ತಿದರೇ ನನಗೆ ಭಯವಾಗುತ್ತದೆ. ಆತನು ಕೋಪಿಷ್ಠ. ನನ್ನ ಸ್ನೇಹಿತಳಾದ ಮೇನಕೆಯು ಯಾವಾಗಲೂ ಅವನನ್ನು ಕಂಡರೆ ಭಯಪಡುತ್ತಲೇ ಇದ್ದಳು. ವಿಶ್ವಾಮಿತ್ರನು ತನ್ನನ್ನು ಕಳುಹಿಸಿದ ದಿನ ಅವನ ಕಣ್ಣುಗಳಿಂದ ಕಿಡಿಗಳು ಸುರಿಯುತ್ತಿದ್ದವೆಂದು ಮೇನಕೆಯು ಹೇಳುತ್ತಿದ್ದಳು. ಆತನ ಉಗ್ರಮೂರ್ತಿಯನ್ನು ನೋಡಿ ಗಡಗಡನೆ ನಡುಗಿ ಮಗಳನ್ನು ಎತ್ತಿಕೊಂಡು ಓಡಿಬಂದು ಬಿಟ್ಟಳಂತೆ. ನಾನು ಅವನ ಕಣ್ಣಿಗೆ ಬಿದ್ದರೆ ಅವನು ನನಗೆ ಶಾಪ ಕೊಡುವುದು ನಿಶ್ಚಯ.

ಇಂದ್ರ—ರಂಭೆ ! ನಾನು ಹೇಳುವುದನ್ನು ಕೇಳು. ನಿನಗೆ ಏನೂ ಭಯವಿಲ್ಲ. ಮನ್ಮಥನು ತನ್ನ ಕೌಶಲದಿಂದ ಮೇನಕೆಯು ವಿಶ್ವಾಮಿತ್ರನಲ್ಲಿ ಅನುರಕ್ತಳಾಗಿ ಕಾಪಟ್ಯವನ್ನು ತೋರುವಂತೆ ಮಾಡಿದನು. ಆದರೆ ನೀನು ಸುಂದರಿ. ಗಂಡಸರ ಮನಸ್ಸನ್ನು ತಿಳಿದವಳು.

ಹೆಂಗಸು ಪ್ರೇಮಕ್ಕೆ ಒಳಗಾದರೆ ಗಂಡಸರ ಮನಸ್ಸನ್ನು ಎಂದಿಗೂ ಸ್ವಾಧೀನಪಡಿಸಿಕೊಳ್ಳಲಾರರು. ಮೋಹದಿಂದ ಮರುಳಾಗಿರುವ ಹೆಂಗಸು ತನ್ನ ಮೋಹಿನೀಶಕ್ತಿಯನ್ನೇ ಕಳೆದುಕೊಳ್ಳುವಳು. ನಿನ್ನ ಹೃದಯವನ್ನು ಪ್ರೇಮವು ಆವರಿಸುವಂತಿಲ್ಲ. ವಿಶ್ವಾಮಿತ್ರನನ್ನು ನಿನ್ನ ಪ್ರೇಮಪಾಶಕ್ಕೆ ನೀನು ಅನಾಯಾಸವಾಗಿ ಕೆಡವಬಲ್ಲೆ. ನಾನೂ ವಸಂತ ರಾಜನನ್ನು ಜತೆಗೆ ಕರೆದುಕೊಂಡು ಹೋಗುತ್ತೇನೆ. ಆಕಾಶವನ್ನು ಭೇಧಿಸಿಕೊಂಡು ಹೋಗಿರುವ ಭಯಂಕರವಾದ ಹಿಮಾಲಯ ಪರ್ವತವೂ ವಿಲಾಸಭೂಮಿಯಾಗುವಂತೆ ಮಾಡುತ್ತೇನೆ. ಹಲವು ಬಣ್ಣದ ಸುವಾಸನೆಯುಳ್ಳ ಹೂವುಗಳು ಎಲ್ಲೆಲ್ಲಿಯೂ ಸಾಲು ಸಾಲಾಗಿ ಕಣ್ಣಿಗೆ ಕಾಣುವಂತೆಯೂ, ಎತ್ತ ತಿರುಗಿದರೂ ಕೋಗಿಲೆಯ ಮೃದುಮಧುರವಾದ ಪಂಚಮಸ್ವರದ ಗಾನವು ಕಿವಿಗೆ ಕೇಳಿಸುವಂತೆಯೂ, ಮಾಡುವುದು ನನಗೇನೂ ಕಷ್ಟವಿಲ್ಲ. ದಿನಕ್ಕೊಂದು ಪರಿಯ ವಿಲಾಸವನ್ನು ತೋರುವ ನೀನು ವಿಶ್ವಾಮಿತ್ರನನ್ನು ಮೋಹಜಾಲಕ್ಕೆ ಸರಿಯಾಗಿ ಸಿಲುಕಿಸಬಲ್ಲೆ: ಅವನು ನಿನ್ನನ್ನು ನೋಡಿ ತಪಸ್ಸನ್ನೇ ಮರೆತುಬಿಡುತ್ತಾನೆ. ನನ್ನ ಕೆಲಸವು ಸುಲಭವಾಗಿ ಕೈಗೂಡುವುದು.

ರಂಭೆ—ದೇವ! ಆ ಋಷಿಯು ಮಹಾ ಕ್ರೂರ. ಈಗ ಅವನ ಸಮೀಪಕ್ಕೆ ಹೋದವರು ಭಸ್ಮವಾಗುತ್ತಾ

ರೆಂದು ಮೇನಕೆಯು ಹೇಳುತ್ತಾಳೆ. ಕಾಮವನ್ನು ಜಯಿಸುವುದಕ್ಕಾಗಿಯೇ ಅವನು ತಪಸ್ಸು ಮಾಡು ತ್ತಿದ್ದಾನೆ. ಅಲ್ಲಿಗೆ ಹೋಗುವ ಮಾತನ್ನೆತ್ತಿದರೆ ಹೃದಯವು ಗಡಗಡನೆ ನಡುಗುವುದು.

ಇಂದ್ರ—ರಂಭೆ! ಅಪ್ಸರ ಸ್ತ್ರೀಯರಲ್ಲೆಲ್ಲಾ ನೀನೇ ಪರ ಮ ಸುಂದರಿ. ತಪೋಭಂಗ ಮಾಡುವುದರಲ್ಲಿ ನಿಸ್ಸೀ ಮಳಾಗಿದ್ದೀಯೆ. ನಡೆ. ತಡಮಾಡಬೇಡ. ಆತನ ತಪಸ್ಸಿನ ಪ್ರಭಾವದಿಂದ ಸುರಪುರಿಯು ತಪಿಸು ತ್ತಿದೆ. ಹೊರಡು. (ಇಬ್ಬರೂ ತೆರಳುವರು)

## ೨. ಹಿಮಾಲಯ ಪರ್ವತ.

ವಿಶ್ವಾ—ಶಂಕರ! ದೇವ! ಸ್ಮರಹರ! ಕರುಣಿಸು. ನಿನ್ನ ನಾಮ ಸ್ಮರಣೆಯಿಂದ ಕಾಮವನ್ನು ಜಯಿಸುವೆನು. ಅನಾಥನಾದ ಭಕ್ತನನ್ನು ತಪಸ್ಸಿಗೆ ವಿಘ್ನಮಾಡುವ ರಮಣಿಯ ಅಪಾಂಗ ಬಾಣಗಳಿಂದ ರಕ್ಷಿಸು. ದಾಸನಿಗೆ ನಿನ್ನ ಚರಣಗಳಲ್ಲಿ ಆಶ್ರಯವನ್ನು ಕೊಡು.

## ದೃಶ್ಯ ಪರಿವರ್ತನ.

ಇದೇನು, ಇದ್ದಕ್ಕಿದ್ದ ಹಾಗೆ ಈ ತುಷಾರಾವೃತವಾದ ಈ ನಿರ್ಜನ ಪ್ರದೇಶದಲ್ಲಿ ಕುಸುಮ ಸೌರಭವೆಲ್ಲಿಂದಬಂ ತು? ಇಲ್ಲೇಕೆ ಭೃಂಗಗಳಗಾನ? ಮಲಯ ಮಾರುತವೇಕೆ ಬೀಸುತ್ತಿದೆ? ಇದೇನು ? ಕೋಕಿಲೆಯು ಪಂಚಮಸ್ವರ ದಲ್ಲಿ ಗಾನ ಮಾಡುತ್ತಿದೆ! ಇದೇನು ಗೊಂಚಲು ಗೊಂ

ಚಲಾಗಿ ನಾನಾ ವರ್ಣದ ಹೂವುಗಳು ಕಣ್ಣಿಗೆ ಕಾಣು ತ್ತಿವೆ! ತಪೋ ವಿಘ್ನಮಾಡಬೇಕೆಂದು ಅಪೇಕ್ಷಿಸಿ ಯಾರೋ ಕಪಟದಿಂದ ಈ ಪರ್ವತ ಶಿಖರದಲ್ಲಿ ಈ ದಿನ ಈ ವಿಡಂಬನೆಯನ್ನು ಮಾಡಿರಬಹುದೆ!

(ರಾಗಹಾಡುತ್ತಾ ಹಾಡುತ್ತಾ ರಂಭೆಯು ಪ್ರವೇಶ.)

ರಂಭೆ—(ಗಾನಮಾಡುವಳು)

ಕಸ್ಮಾತ್ತ್ವಂ ಪಿಕ ಪಂಚಮೇ ವದಸಿ ತತ್ಕಾಮು
ಸ್ಯನೋ ಋದ್ಧಿದಂ |
ಭೃಂಗತ್ವಂ ದೃಢಮೌನಮಾಚರ ರಣತ್ಕಾರೇಣ
ಮಾದ್ಯೇತಕಃ ||
ಕಾಮಿನ್ಯೋವಯ ಮೀಕ್ಷಣಾತ್ಸಕೃದಹೋ ವ
ಸ್ತ್ರಾಂಚಲೋತ್ಕ್ಷೇಪಣಾತ್ |
ಭ್ರೂಭಂಗಾಚ್ಚನಿಮೇಷತಶ್ಚ ಕುರುಮೋ ವಶ್ಯಾ
ನ್ಮನೀಂದ್ರಾನಪಿ ||

ರಂಭೆ—ಇದೇನು ಪಂಚೇಂದ್ರಿಯಗಳನ್ನು ನಿರೋಧ ಮಾಡಿ ತಪಸ್ಸನ್ನು ಮಾಡುತ್ತಿದಾನೆ! ನನ್ನ ಸ್ವರವು ಕಿವಿಗೆ ಬೀಳದಿರಬಹುದೆ? ಮಾತನಾಡುತ್ತೇನೆ. (ವಿಶ್ವಾಮಿತ್ರನ ಹತ್ತಿರಕ್ಕೆ ಬಂದು) ಹೇತಪೋಧನ, ಕಣ್ಣು ತೆರೆದು ನೋಡು, ನಾನೂ ಒಬ್ಬಳು ತಪಸ್ವಿನಿ. ಚಿರ ಕಾಲದಿಂದಲೂ ಮಂಜು ಮುಚ್ಚಿರುವ ಈ ನಿರ್ಜನ ವಾದ ತಪೋವನದಲ್ಲಿ ನಂದವನವನ್ನು ತಿರಸ್ಕಾರಮಾಡುವ ಸುಂದರ ವನವನ್ನು ಸೃಜಿಸಿದೇನೆ. ಆದರ

ಮನಸ್ಕಳಾಗಿ ನಿಮ್ಮ ಶ್ರೀ ಚರಣದಲ್ಲಿ ಪ್ರಾರ್ಥಿಸಿ ಕೊಳ್ಳುತ್ತೇನೆ. ಈ ಸೌಂದರ್ಯ ಪ್ರಪಂಚದಲ್ಲಿ ಪ್ರತ್ಯೇಕವಾಗಿ ನಾವಿಬ್ಬರೇ ಕುಳಿತು ಜೊತೆಜೊತೆಗೆ ಧ್ಯಾನ ಮಾಡೋಣ. ನೋಡು ನೋಡು, ಮಾತನಾಡು, ಹತ್ತಿರದಲ್ಲಿಯೇ ಹೆಂಗಸು, ಎಂಥ ಕಲ್ಲುಮನಸ್ಸು, ನಿನ್ನದು !

ವಿಶ್ವಾ—ಯಾರು ನೀನು, ಪಾಪಿ? ನನ್ನ ತಪೋಭಂಗ ಮಾಡಲು ಬಂದೆಯೋ? ಎಲೆ ದುಷ್ಟೆ, ಎಲೆ, ವಾರ ವಿಲಾಸಿನಿ! ಶಿಲಾ ವಿಗ್ರಹವಾಗಿ ಹೋಗು !

ರಂಭೆ—ಪ್ರಭು, ಪ್ರಭು, ನನ್ನಲ್ಲಿ ಕೃಪೆಮಾಡು, ದೇವೇಂದ್ರನು ನನ್ನನ್ನು ಕಳುಹಿಸಿದ. ನನ್ನಲ್ಲಿ ತಪ್ಪಿಲ್ಲ, ಅಬಲೆ ಹೆಂಗಸು, ಎಂದಾದರೂ ನನ್ನನ್ನು ಕ್ಷಮಿಸು.

ವಿಶ್ವಾ—ಎಲೇ ದುಷ್ಟೆ, ಕಲ್ಲಾಗುವುದಕ್ಕೆ ನಿನಗೆ ಭಯವೇಕೆ? ನಿಮ್ಮ ಮನಸ್ಸು ಕಲ್ಲು, ಇಲ್ಲದಿದ್ದರೆ ಪ್ರೇಮ ಹೀನವಾದ ಮಾತನಾಡಲು ನಿಮಗೆ ಮನಸ್ಸು ಹೇಗೆ ಬರುತ್ತೆ? ಋಷಿಯ ತಪಸ್ಸಿಗೆ ಭಂಗಮಾಡಬೇಕೆಂದು ಬಂದೆಯಲ್ಲವೆ? ನನ್ನ ವಾಕ್ಯ ವ್ಯರ್ಥವಾಗುವುದಿಲ್ಲ. ಯಾರಾದರೂ ಒಬ್ಬ ಪತಿವ್ರತೆಯು ನಿನ್ನನ್ನು ಮುಟ್ಟುವವರೆಗೂ ನೀನು ಅದೇ ಅವಸ್ಥೆಯಲ್ಲಿಯೇ ನಿನ್ನ ದುಷ್ಕರ್ಮದ ಫಲವನ್ನು ಅನುಭವಿಸಬೇಕು.

ರಂಭೆ—ಛೀ ಛೀ, ಸ್ವರ್ಗಸುಖ ಹಾಳಾಗಲಿ, ಅಪ್ಸರ ಜೀವನಕ್ಕೆ ಬೆಂಕಿ ಹಾಕಿತು. ಏನು ಪರಾಧೀನದ

ಜೀವನ! ಋಷಿವರ್ಯ, ನೀನು ನನ್ನಲ್ಲಿ ಯಾವ ಅಪರಾಧವೂ ಇಲ್ಲದಿದ್ದರೂ ಶಾಪಕೊಟ್ಟದ್ದಿ. ನಾನು ನಿರಪರಾಧಿಯಾದದ್ದು ನಿಶ್ಚಯವೇ ಆಗಿದ್ದರೆ ನಾನೂ ನಿನಗೆ ಶಾಪಕೊಡುತ್ತೇನೆ. ನನಗೆ ಎಂದಿನವರೆಗ ಶಾಪ ವಿಮೋಚನೆಯಾಗುವದಿಲ್ಲ, ಅಲ್ಲಿಯವರೆಗೂ ನಿನ್ನ ಅಪಕೀರ್ತಿಯು ಜಗತ್ತಿನಲ್ಲಿ ವ್ಯಾಪಿಸಲಿ. ಕ್ಷಮೆಯನ್ನು ನೀನು ಕಲಿಯುವವರೆಗೂ ನಿನ್ನ ಇಷ್ಟಾರ್ಥವು ಕೈಗೂಡುವುದಿಲ್ಲ.

(ರಂಭೆಯು ಶಿಲೆಯಾಗಿ ಪರಿವರ್ತಿತಳಾಗುವಳು)

ವಿಶ್ವಾ—ಇಂದ್ರನು ನನ್ನ ಪ್ರತಿವಾದಿ. ಹೊಸ ಸ್ವರ್ಗವನ್ನು ಸೃಷ್ಟಿಮಾಡಿದ್ದರಿಂದ ಕ್ಷುಬ್ಧನಾಗಿದಾನೆ. ಸಹಸ್ರ ವಿಘ್ನಗಳು ಬರಲಿ, ಅವನ್ನೆಲ್ಲಾ ದಾಟ ಅಭೀಷ್ಟವನ್ನು ಪಡೆದು ಖಂಡಿತವಾಗಿಯೂ ಕೃತಕಾರ್ಯನಾಗುತ್ತೇನೆ! ಈರ್ಷೆಯೇ ಇಂದ್ರನಿಗೆ ತಕ್ಕ ಶಿಕ್ಷೆ, ನನ್ನ ಉನ್ನತಿಯಿಂದ ಹಗಲೂ ರಾತ್ರಿ ಹೊಟ್ಟೆಕಿಚ್ಚು ಪಟ್ಟು ಸುಟ್ಟು ಹೋಗಲಿ! ಇದಾರು, ಈ ವಿಜನ ಪ್ರದೇಶದಲ್ಲಿ ಬರುತ್ತಿರುವರು?

(ಕಲ್ಮಾಷಪಾದನ ಪ್ರವೇಶ)

ಕಲ್ಮಾಷ—ರಾಜರ್ಷಿ, ಚರಣಾಶ್ರಿತನನ್ನು ಆಶೀರ್ವದಿಸಬೇಕು! ನಾನು ವಸಿಷ್ಠ ದೇವನ ಕೃಪೆಯಿಂದ ಶಾಪ ವಿಮುಕ್ತನಾದೆನು. ನನ್ನ ರಾಕ್ಷಸ ಪ್ರಕೃತಿಯು ಕಳೆದು ಹೋಯಿತು.

ವಿಶ್ವಾ—ಅದು ಹೇಗೆ?

ಕಲ್ಮಾಷ—ಪ್ರಭು, ವಸಿಷ್ಠ ದೇವನು ಕ್ಷಮಾಗುಣದಿಂದ ದೇವರುಗಳಿಗೆಲ್ಲಾ ದೇವರು. .ನನ್ನ ರಾಕ್ಷಸತ್ವದ ಪ್ರಭಾವದಿಂದ ಆತನ ನೂರು ಜನ ಮಕ್ಕಳನ್ನೂ ಧ್ವಂಸಮಾಡಿ ಆತನನ್ನೂ ಆತನ ಹೆಂಡತಿಯನ್ನೂ ಗರ್ಭಿಣಿಯಾದ ಆತನ ಸೊಸೆಯನ್ನೂ ನಾಶ ಮಾಡುವುದಕ್ಕೆ ಹೊರಟೆ. ಆತನು ನನ್ನನ್ನು (ತನ್ನ ತಪಃ ಪ್ರಭಾವದಿಂದ) ಸುಟ್ಟು ಬಿಡುವುದಕ್ಕೆ ಬದಲಾಗಿ ಅದ್ಭುತವಾದ ಕ್ಷಮಾಗುಣದಿಂದ ಕೂಡಿದವನಾಗಿ ಕಮಂಡಲೋದಕವನ್ನು ನನ್ನ ಮೇಲೆ ಪ್ರೋಕ್ಷಿಸಿ ನನ್ನ ರಾಕ್ಷಸತ್ವವನ್ನು ದೂರ ಮಾಡಿದನು. ಆತನ ಆಜ್ಞಾಪ್ರಕಾರವೇ ನನ್ನ ರಾಕ್ಷಸವೃತ್ತಿಯ ಪಾಪ ವಿಮೋಚನಾರ್ಥವಾಗಿ ತೀರ್ಥಯಾತ್ರೆ ಮಾಡುತ್ತಾ ಈ ಪರಮ ಪವಿತ್ರವಾದ ಸಿದ್ಧಾಶ್ರಮದಲ್ಲಿ ರಾಜರ್ಷಿಗಳಾದ ತಮಗೆ ನಮಸ್ಕಾರ ಮಾಡುವುದಕ್ಕಾಗಿ ದಾಸನಾದ ನಾನು ಬಂದಿದ್ದೇನೆ. ನನ್ನ ಯಾತ್ರೆಯು ಮುಗಿಯಿತು. ಆಶೀರ್ವದಿಸಬೇಕು, ನನ್ನ ರಾಜ್ಯಕ್ಕೆ ಹೋಗುತ್ತೇನೆ.

ವಿಶ್ವಾ—ರಾಜ! ನೀನು ರಾಕ್ಷಸತ್ವದ ಪ್ರಭಾವದಿಂದ ವಸಿಷ್ಠನ ನೂರು ಮಂದಿ ಮಕ್ಕಳನ್ನು ಕೊಂದದ್ದು .ವಸಿಷ್ಠನಿಗೆ ಗೊತ್ತಿತ್ತೆ?

ಕಲ್ಮಾಷ—ಹೌದು, ಪ್ರಭು, ಆತನಿಗೆ ಅದು ಸಂಪೂರ್ಣ

ವಾಗಿ ಗೊತ್ತಿತ್ತು. ಆತನು ದಾರುಣವಾದ ಪುತ್ರ ಶೋಕವನ್ನು ಹಿಮಾದ್ರಿಯಂತೆ ಅಚಲಭಾವದಿಂದ ಸಹಿಸಿದನು. ಆದಕಾರಣವೇ, ಆತನ ಅದ್ಭುತವಾದ ಕ್ಷಮಾಗುಣವನ್ನು ಹೊಗಳಿ, ದೇವತೆಗಳು ಪುಷ್ಪವೃಷ್ಟಿಯನ್ನು ಮಾಡಿದರು.

ವಿಶ್ವಾ—ಅದ್ಭುತ, ಅದ್ಭುತ, ವಸಿಷ್ಠನೇ ಧನ್ಯ? ರಾಜಾ, ನಿನಗೆ ಮಂಗಳವಾಗಲಿ! ಸ್ವಸ್ಥಾನಕ್ಕೆ ತೆರಳು.

(ಕಲ್ಮಾಷಪಾದನು ಹೊರಟು ಹೋಗುವನು)

ವಸಿಷ್ಠನೇ ಧನ್ಯ! ಆತನೊಂದಿಗೆ ಹೋಲಿಸಿದರೆ ನಾನು ಅತಿಹೀನ! ನನ್ನ ತಪಸ್ಸಿಗೆ ತಿರಸ್ಕಾರ! ಯೋಗೈಶ್ವರ್ಯಕ್ಕೆ ಬೆಂಕಿ ಹಚ್ಚಿತು! ನನ್ನ ಸ್ವರ್ಗ ಸೃಷ್ಟಿ, ಗ್ರಹನಕ್ಷತ್ರ ಸೃಷ್ಟಿ, ಫಲಪುಷ್ಪ ಸೃಷ್ಟಿ ಇವೆಲ್ಲಕ್ಕೂ ತಿರಸ್ಕಾರ! ನಾನು ನರಾಧಮ, ಅರಿಷಡ್ವರ್ಗದ ದಾಸ! ಹತ್ತು ವರ್ಷ ಶತ್ರುವಾದ ಕಾಮುಸ ದಾಸತ್ವಮಾಡಿದೆ. ಕಾಮವನ್ನು ನಿಗ್ರಹಿಸುವುದಕ್ಕಾಗಿ ತಪಸ್ಸು ಮಾಡಿ ಕ್ರೋಧವೆಂಬ ಚಂಡಾಲ ಗ್ರಸ್ತನಾಗಿ ಅಬಲೆಯಾದ ರಂಭೆಗೆ ಶಾಪಕೊಟ್ಟೆ! ಆ ವಸಿಷ್ಠನ ನೂರು ಜನ ಮಕ್ಕಳ ನಾಶಕ್ಕೂ ನಾನೇ ಕಾರಣ; ನಾನೇ ಕಲ್ಮಾಷಪಾದನಿಗೆ ದುರಂತವಾದ ರಾಕ್ಷಸಶಕ್ತಿಯನ್ನು ಕೊಟ್ಟೆ, ನನ್ನ ಪುತ್ರಶೋಕಕ್ಕೆ ಪ್ರತೀಕಾರ ಮಾಡಬೇಕೆಂಬ ಆಗ್ರಹ ಮನಸ್ಸಿನಲ್ಲಿತ್ತು. ಆತ್ಮಗ್ಲಾನಿಯಿಂದ ಅಂಧನಾಗಿ ನನ್ನ ಮನಸ್ಸಿನ ಕಾಪಟ್ಯವನ್ನೂ ವಸಿಷ್ಠನೊಂದಿಗೆ ಶತ್ರುತ್ವವನ್ನೂ ಅರಿ

ಯದೆ, ಈ ದಿನವೂ ಮನಸ್ಸು ಅದೇ ವಿಷಯವನ್ನೇ ಕಾರುತ್ತಿದೆ ತಪಸ್ಸಿನಿಂದ ಹೇಗೆ ತಾನೆ ಫಲಪ್ರಾಪ್ತಿಯಾಗುವುದು? ಕಾಮ ಕ್ರಿಯೆಯಿಂದ ಅಸ್ಥಿ ಅಶುದ್ಧ, ಕ್ರೋಧದಿಂದ ಮನಸ್ಸು ಅಶುದ್ಧ, ಈ ಅಶುದ್ಧವಾದ ದೇಹ ಮನಸ್ಸುಗಳಿಂದ ಹೇಗೆ ತಾನೇ ತಪಸ್ಸಿನ ಫಲವು ದೊರಕುವುದು? ಸಮಸ್ತ ತೀರ್ಥಗಳಿಗೂ ಹೋಗುತ್ತೇನೆ. ತೀರ್ಥಯಾತ್ರೆಯ ಮಹಾತ್ಮ್ಯೆಯಿಂದಾದರೂ ನನ್ನ ದೇಹ ಮನಗಳು ಪವಿತ್ರವಾಗುತ್ತವೆಯೇನೋ ನೋಡುತ್ತೇನೆ.

## ೩. ಕಾಡುದಾರಿ.

(ಮುಂದೆ ಬ್ರಹ್ಮಣ್ಯದೇವ, ಹಿಂದೆ ಸದಾನಂದರ ಪ್ರವೇಶ.)

ಸದಾ—ಏ ಹುಡುಗಾ, ಎಲೋ ಹುಡುಗಾ, ನಾನು ನಿನ್ನನ್ನೇ ಹುಡುಕಿಕೊಂಡು ಬರುತ್ತಿದ್ದೆ.

ಬ್ರಹ್ಮ—ಏಕೆ? ಹೇಳು ನೋಡೋಣ.

ಸದಾ—ನೋಡು, ನಿನಗೆ ಅನೇಕ ತರಹ ಸಿದ್ಧಿಗಳಿವೆಯಷ್ಟೆ, ರಾಜನನ್ನು ಹಿಂದಿರುಗಿಸಬಲ್ಲೆಯಾ? ನಾನು ಎಷ್ಟೋ ಪ್ರಯತ್ನಪಟ್ಟೆ, ಅವನನ್ನು ಬೇರೆ ಹಿಂದಿರುಗಿಸಲಾಗಲಿಲ್ಲ.

ಬ್ರಹ್ಮ—ಊಹುಂ, ಅದಾಗುವುದಿಲ್ಲ. ಅವನಿಗೆ ಬ್ರಹ್ಮರ್ಷಿತ್ವ ಬಂದ ಹೊರತು ಅವನು ಹಿಂದಿರುಗುವದಿಲ್ಲ.

ಸದಾ—ಬ್ರಹ್ಮರ್ಷಿತ್ವ, ಬ್ರಹ್ಮರ್ಷಿತ್ವ, ಎಂತ ಏನೋ ಕೇಳಿದೇನೆ. ಅದರ ಸ್ಥಿತಿಗತಿಯೇನು ಹೇಳುತ್ತೀಯಾ?

ಬ್ರಹ್ಮ—ತಿಳಿಯುವದಕ್ಕೇನು, ವಸಿಷ್ಠನ ಹಾಗೆ ಆಗ ಬೇಕು.

ಸದಾ—ಬಿಡುಬಿಡಯ್ಯಾ, ವಸಿಷ್ಠ? ವಸಿಷ್ಠನ ಅಪ್ಪ ನಾಗಿಬಿಟ್ಟಿದ್ದಾನೆ. ಒಂದು ಕರಿಯ ಹಸುವನ್ನು ತೆಗೆದುಕೊಂಡು ಹೋದರೆ ವಸಿಷ್ಠನಿಗೆ ಯೋಚನೆ? ಇವನು ಸ್ವರ್ಗಕ್ಕೆ ಬದಲು ಬೇರೊಂದು ಸ್ವರ್ಗವನ್ನೇ ಸೃಷ್ಟಿಮಾಡಿಬಿಟ್ಟಿದ್ದಾನೆ. ನೀನು ಅದನ್ನು ನೋಡ ಲಿಲ್ಲ. ಅವನು ಸೃಷ್ಟಿಸಿರುವ ಹಣ್ಣುಗಳನ್ನು ತಿಂದ ಮೇಲೆ ಲೋಕದ ರುಚಿರುಚಿಯಾದ ಸಿಹಿ ತಿಂಡಿಗ ಳನ್ನು ಕಂಡರೇ ಓಕರಿಕೆ ಬರುತ್ತೆ. ನಿನ್ನ ವೇಷ ವನ್ನು ಬದಲಾಯಿಸಿಕೊಂಡು ಬಂದು ರಾಜನನ್ನು ದೇಶಕ್ಕೆ ಕರೆದುಕೊಂಡು ನಡೆ. ಆಮೇಲೆ ನಿನಗೆ ಯಾವ ಆಲೋಚನೆಯೂ ಇರುವುದಿಲ್ಲ. ಅಮ್ಮಣ್ಣಾ ಮ್ಮನ ಮನೆ, ಆ ಮನೆ, ಈ ಮನೆಗೆ ತಿಂಡಿಗೆ ಹೋ ಗಬೇಕೇ ಆಮೇಲೆ? ಅರಮನೆಯಲ್ಲಿ ರಾಜಭೋಜನ, ಯಾವ ತಾಪತ್ರಯವೂ ಇಲ್ಲ. ಎಲ್ಲಿ? ರಾಜನನ್ನು ಹಿಂದಿರುಗಿಸು, ನೋಡೋಣ.

ಬ್ರಹ್ಮಣ್ಯ—ಒಂದೆರಡು ದಿನ ಕಳೆಯಲಿ. ಹಠದ ಉ ರುಬು ಸ್ವಲ್ಪ ಕಡಿಮೆಯಾಗಲಿ, ಬಲ್ಲೆಯೋ ನಿಮ್ಮ ರಾಜ ಬಹಳ ಹಠನಾರಿ ಅನ್ನೋದನ್ನ? ಈ ಹಠವೇ ನಡೆಯುತ್ತಾ ಇದೆ.

ಸದಾ—ಅದೇನೋ ನಿಜ.

ಬ್ರಹ್ಮಣ್ಯ—ನೀನು ನನಗೊಂದು ಕೆಲಸ ಮಾಡಿಕೊಡು. ನೋಡೋಣ.

ಸದಾ—ಅದೇನು ಕೆಲಸ? ಹೇಳು.

ಬ್ರಹ್ಮಣ್ಯ—ಒಂದು ದೊಡ್ಡ ಯಜ್ಞವಾಗುತ್ತೆ.

ಸದಾ—ಭೇಷ್ !

ಬ್ರಹ್ಮಣ್ಯ—ಅಂಬರೀಷರಾಜನು ಯಜ್ಞವನ್ನು ಮಾಡುತ್ತಾನೆ.

ಸದಾ—ಭೇಷ್ !

ಬ್ರಹ್ಮಣ್ಯ—ನರಮೇಧ ಯಜ್ಞ.

ಸದಾ—ಅದೆಂಥದು?

ಬ್ರಹ್ಮಣ್ಯ—ಮನುಷ್ಯನನ್ನು ಕತ್ತರಿಸಿ ಆ ಮಾಂಸವನ್ನು ಆಹುತಿ ಕೊಡುತ್ತಾರೆ.

ಸದಾ—ಅಯ್ಯೋ ಹುಡುಗ! ಸ್ವಲ್ಪ ತಾಳು. ನನಗೊಂದು ಸಂದೇಹ. ಆ ಮಾಂಸವನ್ನು ತಿನ್ನೋ ಸಂದರ್ಭ ಇದೆಯೋ ಇಲ್ಲವೋ? ಹೇಳು.

ಬ್ರಹ್ಮಣ್ಯ—ಇಲ್ಲ. ಆದರೇನು?

ಸದಾ—ಏಕೆ? ನೀನು ಬಹಳ ನಿಷ್ಕರುಣಿ. ತಿನ್ನುವುದರಲ್ಲಿ ಒಳ್ಳೆಯದು ಕೆಟ್ಟದ್ದು ಎಂಬ ವಿವೇಚನೆಯೇ ಇಲ್ಲ ನಿನಗೆ? ಯಾರು ಏನನ್ನು ಕೊಟ್ಟರೆ ಅದನ್ನು ತಿಂದುಬಿಡುತ್ತೀಯೋ?

ಬ್ರಹ್ಮಣ್ಯ—ಅಜ್ಜಮ್ಮ ಕಥೆ ಹೇಳೋದನ್ನು ಕೇಳಿಲ್ಲವೆ? ಕೇಳು. ಒಂದು ಮಗುವಿನ ಜತೆಯಲ್ಲಿ ಯಾರು ಬಂದಿದಾರೇಂತ.

ಸದಾ—ಒಳ್ಳೇದು, ನೋಡೋಣ ಹೇಳು.

ಬ್ರಹ್ಮಣ್ಯ—ಇವರನ್ನು ನಿಮ್ಮ ರಾಜನ ಹತ್ತಿರಕ್ಕೆ ಕರೆದು ಕೊಂಡುಹೋಗಿಬಿಡು. ಆಗ ನಡೆಯುವ ತಮಾಷೆ ನೋಡು.

ಸದಾ—ಇದನ್ನು ಮೆಟ್ಟಿ ಹಾರಿದಂಥ ತಮಾಷೆಯನ್ನೆಲ್ಲ ನೋಡಿದ್ದೇನೆ. ಮತ್ತೆ ತಮಾಷೆ ನೋಡಬೇಕೆಂಬ ಆಸೆಯೇ ಇಲ್ಲ.

ಬ್ರಹ್ಮಣ್ಯ—ನೀನು ಈ ಕೆಲಸವನ್ನು ಮಾಡಿಯೇ ಮಾಡ ಬೇಕು. ಈ ಹುಡುಗನನ್ನು ಕತ್ತರಿಸಿ ಹಾಕುವುದ ಕ್ಕಾಗಿ ಕರೆದುಕೊಂಡು ಹೋಗುತ್ತಿದ್ದಾರೆ. ಹೇಗಾ ದರೂ ಮಾಡಿ ನಿಮ್ಮ ರಾಜನ ಹತ್ತಿರಕ್ಕೆ ಅವನನ್ನು ಕರೆದುಕೊಂಡು ಹೋದರೆ, ಅವನು ಬದುಕಿಕ್ಕೊಳ್ಳು ತ್ತಾನೆ.

ಸದಾ—ಅವನು ನಿನಗೇನಾಗಬೇಕು ?

ಬ್ರಹ್ಮಣ್ಯ—ಅಣ್ಣಾ, ಕೇಳು. ನೀನು ತುಂಬಾ ಚರ್ಚೆ ಮಾಡುವುದಕ್ಕೆ ಮೊದಲುಮಾಡಿಬಿಟ್ಟೆ. ಅವನು ಬದುಕದಿದ್ದರೆ ನನ್ನ ಪ್ರಾಣ ತುಡುಗಿಕ್ಕೊಳ್ಳುತ್ತೆ.

ಸದಾ—ನೋಡು ನನ್ನ ಪ್ರಾಣವೂ ಹೇಗೆ ತುಡುಗಿಕ್ಕೊ ಳ್ಳುತ್ತಿದೇಂತ.? ಈಗ ನಾನೇನು ಮಾಡಲಿ?

ಬ್ರಹ್ಮಣ್ಯ—ಹೇಗಾದರೂ ಮಾಡಿ, ಅವರಿಗೆ ಅದೂ ಇದೂ ಹೇಳಿ ವಿಶ್ವಾಮಿತ್ರನ ಹತ್ತಿರಕ್ಕೆ ಕರೆದುಕೊಂಡು, ಹೋಗಿ ಬಿಟ್ಟುಬಿಡಬೇಕು.

ಸದಾ—ಅವನ ಹತ್ತಿರಕ್ಕೆ ಕರೆದುಕೊಂಡು ಹೋಗಬೇಕೆ? ಅವನು ಈಗ ಬೆಟ್ಟದ ತುದಿಯಲ್ಲಿ ಕುಳಿತಿದ್ದಾನೆ. ಈ ಹಿಮದಲ್ಲಿ ಬೆಟ್ಟ ಹತ್ತಿದರೆ ಬದುಕುವುದುಂಟೆ?

ಬ್ರಹ್ಮಣ್ಯ—ಇಲ್ಲ, ಇಲ್ಲ. ಅವನು ಈಗ ತೀರ್ಥಕ್ಷೇತ್ರಕ್ಕೆ ಹೋಗಿದ್ದಾನೆ. ಇಲ್ಲಿಗೆ ಬಹಳ ಹತ್ತಿರದಲ್ಲಿಯೇ ಮರದ ಕೆಳಗೆ ಕುಳಿತು ಧ್ಯಾನಮಾಡುತ್ತಿದ್ದಾನೆ. ನೋಡಿಕೊಂಡು ಬರೋಣ.

ಸದಾ—ನಿಜ. ಇಳಿದು ಬಂದಿದ್ದಾನೆ. ಮನಸ್ಸು ಬದಲಾಯಿಸಿರಬಹುದು. ಅಲ್ಲವೆ?

ಬ್ರಹ್ಮಣ್ಯ—ಈ ಹುಡುಗನ ಕೆಲಸಕ್ಕೆ ಅವನನ್ನು ಸಿಕ್ಕಿಸಬೇಡ. ಐದಾರು ಕೆಲಸಗಳನ್ನು ಮಾಡುತ್ತಾ ಮನಸ್ಸು ಬದಲಾಯಿಸುತ್ತದೆ.

ಸದಾ—ಒಳ್ಳೆಯದು, ಏನು ಮಾಡಬೇಕು? ಹೇಳು. ಕೇಳುತ್ತೇನೆ. ರಾಜರು ಹಿಂದಿರುಗಿದರೆ ನಿನ್ನನ್ನು ಬಹಳ ಗೌರವಿಸುತ್ತೇನೆ. ನಿನ್ನ ಗಲ್ಲವನ್ನು ಹಿಡಿದುಕೊಂಡು ನಿನಗೆ ಮುತ್ತುಕೊಡುತ್ತೇನೆ. ಬಹಳ ಪ್ರೀತಿಯಿಂದ ಮಗುವಿನ ಹಾಗೆ ನಿನ್ನನ್ನು ಎತ್ತಿಕೊಳ್ಳುತ್ತೇನೆ. ಹೇಳು, ಬೇಗ ಹೇಳು.

ಬ್ರಹ್ಮಣ್ಯ—ಈ ಹುಡುಗನನ್ನು ವಿಶ್ವಾಮಿತ್ರನ ಹತ್ತಿರಕ್ಕೆ ಕರೆದುಕೊಂಡು ಹೋಗು. ಹಿಂದೆ ತ್ರಿಶಂಕುವಿಗೆ ಹೇಳಿಕೊಟ್ಟಿದ್ದಂತೆಯೇ ವಿಶ್ವಾಮಿತ್ರನ ಪಾದಗಳನ್ನು ಬಲವಾಗಿ ಹಿಡಿಯುವಂತೆ- ಈ ಹುಡುಗನಿಗೂ ಹೇಳಿಕೊಡು.

ಸದಾ—ಒಳ್ಳೆಯದು, ನೋಡುತ್ತೇನೆ. ಇದೇನು ನೀನು ಹೊರಟು ಬಿಟ್ಟೆ? ನೀನೂ ಇರುವುದಿಲ್ಲವೆ? ಒಂದೆರಡು ಸಲ ಹೇಳಿಕೊಡಬೇಕು. ಇಲ್ಲದಿದ್ದರೆ ಅವರಿವರು ಈ ಹುಡುಗನನ್ನು ದಾರಿತಪ್ಪಿಸಿ ಅಡ್ಡದಾರಿಗೆ ಎಳೆಯಬಹುದು.

ಬ್ರಹ್ಮಣ್ಯ—ನನ್ನ ಮಾತನ್ನು ಯಾರೂ ಕೇಳುವುದಿಲ್ಲ.

ಸದಾ—ಹಾಗಾದರೇ ನಾನೇ ನೋಡುತ್ತೇನೆ.

(ಬ್ರಹ್ಮಣ್ಯದೇವನು ಗಾನಮಾಡುವನು.)

ಸದಾ—ಸೊಗಸಾದ ಸಂಗೀತ, ಅಣ್ಣಯ್ಯಾ! ಮನಸ್ಸು ಹಾಗೆಯೇ ಆನಂದದಲ್ಲಿ ಮುಳುಗಿ ತೇಲುತ್ತಿದೆ. ಅಣ್ಣಯ್ಯಾ!

(ಶುನಶ್ಶೇಫನನ್ನು ಕರೆದುಕೊಂಡು ಇಬ್ಬರು ರಾಜದೂತರು ಬರುವರು)

ಏನಪ್ಪಾ! ಆಡುತ್ತಿದ್ದ ಹುಡುಗನನ್ನ ಹಿಡಿದಿರೇಕೆ?

ಮೊದಲನೆಯ ದೂತ—ಏನು? ಸ್ವಾಮಿ! ಏನಾಗಿದೆ?

ಸದಾ—ಕೂಗಿಕೊಳ್ಳಬೇಡ. ನಿನ್ನ ಕೊರಳು ಕೇಳಿ ಈಗಲೇ ಹಿಂದಿರುಗುತ್ತಾನೆ.

ಮೊದಲನೆಯ ದೂತ—ಯಾರು ಹಿಂದಿರುಗುವವರು ?

ಸದಾ —ಕೇಳಲಿಲ್ಲವೇ ನೀನು ? ಹಾಡುತ್ತಾ ಕ್ಷೀಣಿಯು ತ್ತಾ ಕೆಳಗೆ ಹೋದದ್ದನ್ನು ?

ಮೊದಲನೆಯ ದೂತ—ಯಾರು ಅವನು ?

ಸದಾ—ನಮ್ಮ ಚಿಕ್ಕಮ್ಮನ ಗಂಡನ ನೆಂಟ. ಯಾರದು? ಇದೇನಾಶ್ಚರ್ಯ ?

ಮೊದಲನೆಯ ದೂತ—ಏನಾಗಿದೆ, ಸ್ವಾಮಿ ? ಹೇಳಿ, ಬೇಗ ಹೇಳಿ.

ಸದಾ—ಇನ್ನೇನಾಗೋದು ? ಅದೊಬ್ಬ ರಾಕ್ಷಸನ ಮಗು. ಮನುಷ್ಯನ ಹಾಗೆ ಇಲ್ಲೆಲ್ಲಾ ಸುತ್ತುತ್ತಿದೆ. ಈ ಕಾಡಿನೊಳಗೆ ಅವರ ಚಿಕ್ಕಮ್ಮನಿದ್ದಾಳೆ. ಈ ಹುಡುಗ ಸೊಗಸಾಗಿ ಹಾಡುವುದನ್ನು ಮಾತ್ರ ಎಂದೂ ಮರೆಯುವುದಿಲ್ಲ. ಆ ಮುದುಕಿಗೆ ಎರಡು ಕೈಗಳೂ ಉದ್ದವಾಗಿವೆ. ಅವಳು ಕೈಚಾಚಿ ಸಿಕ್ಕಿದವರ ಕತ್ತನ್ನು ಮುರಿದು ರಕ್ತ ಹೀರುತ್ತಾಳೆ.

ಎರಡನೆಯವ—ಇದು ನಿಜವೆ ?

ಸದಾ—ಒಂದೆರಡು ಹೆಜ್ಜೆ ನಡೆ. ಈಗಲೇ ಗೊತ್ತಾಗುತ್ತೆ.

ಮೊದಲನೆಯವ—ಕೇಳಿ, ಸ್ವಾಮಿ ! ನಾನು ಈ ದಾರಿಯಲ್ಲೇ ಹಗಲೂ ರಾತ್ರಿ ತಿರುಗಾಡುತ್ತಾ ಇದೇನೆ.

ಸದಾ—ಓಡಾಡುತ್ತಿರಬಹುದು. ಒಂದು ವೇಳೆ ಹಿಡಿ

ದುಕೊಂಡರೆ ಏನು ಮಾಡುತ್ತೀ ?

ಮೊದಲನೆಯವ—ಹೌದು ಸ್ವಾಮಿ. ನಿಜವಾಗಿಯೂ ರಾಕ್ಷಸನಿದಾನೆಯೇ ಸ್ವಾಮಿ ?

ಸದಾ—ನಿನಗೆ ನಂಬಿಕೆಯಿಲ್ಲದಿದ್ದರೆ ಈ ನದೀ ತೀರದಲ್ಲಿಯೇ ವಿಶ್ವಾಮಿತ್ರನಿದ್ದಾನೆ. ಕೇಳೋಣ ನಡೆ.

ಎರಡನೆಯವ—(ಮೊದಲನೆಯವನನ್ನು ಕುರಿತು) ಬಾರೋ ಹೋಗೋಣ. ಇವನ ಮಾತು ಯಾರು ಕೇಳುತ್ತಾರೆ. ಈ ದಾರಿಯಲ್ಲೇ ನಾವು ನಿತ್ಯ ತಿರುಗಾಡುತ್ತಾ ಇರುತ್ತೇವೆ. ಸರಿಯಾದ ದಾರಿಯಲ್ಲಿ ಹೋಗುವುದನ್ನು ಬಿಟ್ಟು ವಿಶ್ವಾಮಿತ್ರನ ಹತ್ತಿರಕ್ಕೆ ಸುತ್ತಿಕೊಂಡು ಹೋಗಬೇಕಂತೆ.

ಸದಾ—ಅಯ್ಯಾ ಬಾಚಿದ ಗಡ್ಡದಣ್ಣಯ್ಯಾ ! ನಿನಗೆ ಮಕ್ಕಳು ಮರಿ ಇದಾರೆಯಷ್ಟೆ ?

ಮೊದಲನೆಯವ—ಇಲ್ಲದೇ ಉಂಟೆ ಸ್ವಾಮಿ !

ಸದಾ—ಹಾಗಾದರೆ ಇವನು ಈ ದಾರಿಯಲ್ಲಿ ಹೋಗಲಿ. ನೀನು ಸ್ವಲ್ಪ ಸುತ್ತಿಕೊಂಡು ಹೋಗು.

ಮೊದಲನೆಯವ—ಹಾಗಾಗುವುದಿಲ್ಲ ಸ್ವಾಮಿ. ಬ್ರಾಹ್ಮಣ ಹೇಳುತ್ತಾನೆ ನಡೆ. ಸ್ವಲ್ಪ ಸುತ್ತಿಕೊಂಡೇ ಹೋಗೋಣ. ಅದೂ ಹೆಚ್ಚೇನಿಲ್ಲ. ಕೊಂಬಿನ ಕೂಗು ದೂರ ಕೂಡಾ ಇಲ್ಲ. ಸುತ್ತಿಕೊಂಡು ಹೋಗೋಣ ನಡೆ.

ಎರಡನೆಯವ—ಸ್ವಾಮಿ! ಇತ್ತಲಾಗಿ ದಾರಿಯಿದೆಯೋ?

ಸದಾ—ಬಲು ಸೊಗಸಾದ ದಾರಿ. ನೆಟ್ಟಗೆ ಅಲ್ಲಿಗೇ ಕರೆದುಕೊಂಡು ಹೋಗಿಬಿಡುತ್ತೆ.

(ಎಲ್ಲರೂ ತೆರಳುವರು.)

## ೪. ನದೀತೀರದಲ್ಲಿ ಮರದ ಕೆಳಗೆ.

ವಿಶ್ವಾಮಿತ್ರ.

ವಿಶ್ವಾ—ಏನು ಮಾಡಬೇಕು. ತೀರ್ಥಯಾತ್ರೆ ಮಾಡಿದರೂ ಶಾಂತಿಲಾಭವಾಗಲಿಲ್ಲ. ವಸಿಷ್ಠನ ನೂರು ಜನ ಮಕ್ಕಳೂ ನನ್ನಿಂದಲೇ ಹತರಾದರು ಎಂಬ ಚಿಂತೆ ಬೆಂಕಿಯಂತೆ ನನ್ನ ಮೆದುಳಿನಲ್ಲಿ ಉರಿಯುತ್ತಿದೆ. ರಂಭೆಗೆ ಶಾಪಕೊಟ್ಟೆ—ಅವಳ ದೀನ ಮುಖವು ಕಣ್ಣಿಗೆ ಕಟ್ಟಿದ ಹಾಗಿದೆ. ನಿದ್ದೆ ಬಂದಾಗ ಮೇನಕೆ ಪಕ್ಕದಲ್ಲಿದ್ದ ಹಾಗೆ ಕಾಣುತ್ತಿದೆ. ಶಾಂತಿಯಿಲ್ಲದ ಮನಸ್ಸಿಗೆ ಹೇಗೆ ಶಾಂತಿಯು ಬರಬೇಕು? ಏನು ಪ್ರಾಯಶ್ಚಿತ್ತ ಮಾಡಿ ಕೊಳ್ಳಲಿ ?

(ಸದಾನಂದ ಶುನಶೇಫರ ಪ್ರವೇಶ)

ಸದಾ—ಹೋಗು, ಹೋಗು, ಹೋಗಿ ಕಾಲುಗಳನ್ನು ಗಟ್ಟಿಯಾಗಿ ಹಿಡಿದು ಕೋ.

ಶುನ—(ಹೋಗಿ ವಿಶ್ವಾಮಿತ್ರನ ಪಾದಗಳನ್ನು ಹಿಡಿದು) ಋಷಿವರ್ಯ, ನಾನು ಅನಾಥನಾದ ಬ್ರಾಹ್ಮಣವಟು, ನನ್ನ ಪ್ರಾಣವನ್ನು ಉಳಿಸು.

ವಿಶ್ವಾ—ಯಾರಪ್ಪಾ, ನೀನು ?

ಶುನ—ನಾನು ಅನಾಥ ಬ್ರಾಹ್ಮಣ ವಟು. ನಾನು ನಮ್ಮ ತಂದೆಗೆ ನಡುಕಲ ಮಗ. ಅಂಬರೀಷ ರಾಜನ ನರಮೇಧ ಯಜ್ಞದಲ್ಲಿ ಆಹುತಿ ಕೊಡುವುದಕ್ಕಾಗಿ ನನ್ನ ತಂದೆಯು ನನ್ನನ್ನು ಮಾರಿದ. ಕತ್ತಿಯಿಂದ ನನ್ನ ತಲೆ ಕಡಿಯುತ್ತಾರೆ. ನನಗೆ ಮಹಾ ಭಯವಾಗುತ್ತದೆ. ನನ್ನನ್ನು ಈ ಭಯದಿಂದ ಕಾಪಾಡಬೇಕು.

ವಿಶ್ವಾ—ಚಿಂತೆಯಿಲ್ಲ, ಧೈರ್ಯವಾಗಿರು.

(ದೂತನ ಪ್ರವೇಶ)

೨ನೆ ದೂತ—ನೋಡಪ್ಪಾ ನೋಡು, ಈ ದಾರಿಯಲ್ಲಿ ಬಂದು ಎಂಥ ಕಷ್ಟಕ್ಕೆ ಸಿಕ್ಕಿದೆವು. ಇವನು ವಿಶ್ವಾಮಿತ್ರರ ಮರೆ ಹೊಕ್ಕಿದಾನೆ.

ಶುನ—ಪ್ರಭು, ಈ ರಾಜದೂತ ನನ್ನನ್ನು ಹಿಡಿದುಕೊಂಡು ಹೋಗಲು ಬರುತ್ತಿದ್ದಾನೆ.

ವಿಶ್ವಾ—ಭಯಪಡಬೇಡ, ಧೈರ್ಯವಾಗಿರು.

೨ನೆ ದೂತ—ಪ್ರಭು, ತಾವು ಈ ಬ್ರಾಹ್ಮಣ ಬಾಲಕನಿಗೆ ಅಭಯ ಪ್ರದಾನ ಮಾಡಿರುವಿರಿ, ತಮ್ಮ ಹತ್ತಿರದಿಂದ ಅವನನ್ನು ಹಿಡಿದುಕೊಂಡು ಹೋಗಲು ನಮಗೆ ಸಾಧ್ಯವಿಲ್ಲ. ಆದರೆ ಈ ಹುಡುಗನನ್ನು ಬಿಟ್ಟು ಹೋದರೆ ನಮ್ಮ ಜೀವವುಳಿಯುವ ಸಂಭವವಿಲ್ಲ.

೧ನೆ ದೂತ—ಅಂಬರೀಷ ರಾಜನು ಯಜ್ಞಕ್ಕೆ ಗೊತ್ತು ಮಾಡಿದ ಪಶುವನ್ನು ಯಾರೋ ಕದ್ದರು. ಆತನ ಪುರೋಹಿತ ಆ ಪಶುವಿಗೆ ಬದಲಾಗಿ ನರಮಾಂಸ ವನ್ನು ಯಜ್ಞದಲ್ಲಿ ಆಹುತಿ ಕೊಡದೇ ಹೋದರೆ ರಾಜನು ನರಕಕ್ಕೆ ಹೋಗುವನೆಂದು ವಿಧಿಸಿದನು. ಆದಕಾರಣವೇ ಲಕ್ಷ ಗೋವುಗಳನ್ನು ಅದಕ್ಕೆ ತಕ್ಕ ಷ್ಟು ದಕ್ಷಿಣೆಯನ್ನೂ ಕೊಟ್ಟು ಈ ಬಾಲಕನನ್ನು ಈತನ ತಂದೆಯಿಂದ ಕೊಂಡುಕ್ಕೊಂಡು ಬಂದೆವು.

ವಿಶ್ವಾ—ಮಗು, ನಿಮ್ಮ ತಂದೆ ನಿನ್ನನ್ನು ಮಾರಿದನೆ?

೧ನೆ ದೂತ—ಈತನ ತಂದೆ ಬಹುದೀನ, ದರಿದ್ರ, ಬಹು ದೀನ ದರಿದ್ರ, ಬಹುದಿನ ಅನ್ನವಿಲ್ಲದೆ ಸಂಸಾರ ಮಾ ಡುತ್ತಿದ್ದ. ದಾರಿದ್ರ್ಯ ನಿರ್ಬಂಧದಿಂದ ಮಗನನ್ನು ಮಾರಿದ.

ವಿಶ್ವಾ—ಆತನಿಗೆ ಎಷ್ಟು ಜನ ಮಕ್ಕಳು?

ಶುನ—ಪ್ರಭು, ನಾವು ಮೂರು ಜನ ಅಣ್ಣ ತಮ್ಮಂದಿ ರು; ಹಿರಿಯವನು ತಂದೆಗೆ ಪ್ರಿಯನಾದವನು, ಕಿರಿ ಯವನು ತಾಯಿಗೆ ಪ್ರಿಯ; ನಾನು ಅನಾಥ-ನನ್ನ ನ್ನು ಬಿಟ್ಟು ಬಿಟ್ಟರು.

೨ನೆ ದೂತ—ಸ್ವಾಮಿ, ಅಪ್ಪಣೆ ಕೊಡಿ, ನಾವು ಹುಡು ಗನನ್ನು ಕರೆದುಕೊಂಡು ಹೋಗುತ್ತೇವೆ.

ವಿಶ್ವಾ—ಇಷ್ಟವಿದ್ದರೆ ನಾನೇ ಹುಡುಗನನ್ನು ಕರೆದು ಕೊಂಡು ಬರುತ್ತೇನೆ. (ಸ್ವಗತ) ನಾರಾಯಣನು

ನನ್ನ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಹೊಂದುವ ಸುಯೋಗವನ್ನುಂಟು ಮಾಡಿರುವಂತೆ ಕಾಣುತ್ತದೆ. ಮನೋವಾಕ್ಕಾಯಗಳಿಂದ ಪರಹಿತವನ್ನು ಸಾಧಿಸುವುದು ಒಂದೇ ಪ್ರಾಯಶ್ಚಿತ್ತ. ಶರಣಾಗತನನ್ನು ರಕ್ಷಿಸುವುದು ಅವಶ್ಯಕರ್ತವ್ಯ. ಬ್ರಹ್ಮರ್ಷಿತ್ವ ತುಚ್ಛವಾದ್ದು ; ಪರಹಿತಸಾಧನವ್ರತವೇ ಶ್ರೇಯಸ್ಕರವಾದ್ದು. ಪರಹಿತಾಸಕ್ತನಾದವನಿಗಿಂತಲೂ ಹೆಚ್ಚಿನವನು ಯಾರು ? ಯಾರು ? ನಾನು ಆ ಉಚ್ಚವ್ರತ ಸಾಧನೆಯನ್ನು ಮಾಡುತ್ತೇನೆ, ಬ್ರಹ್ಮರ್ಷಿತ್ವವನ್ನು ಪಡೆದದ್ದರಿಂದ ನನಗೇನೂ ಪ್ರಯೋಜನವಿಲ್ಲ.

೨ನೆ ದೂತ—ಹಾಗಾದರೆ ದಯಮಾಡೋಣಾಗಲಿ, ಹುಡುಗನನ್ನು ಬಿಟ್ಟುಹೋದರೆ ನಮಗೆ ಮರಣ ದಂಡನೆ ಯಾಗುತ್ತದೆ.

ವಿಶ್ವಾ—ನಡೆಯಿರಿ. ಮಗು, ನೀನು ಪಿತೃಮಾತೃವರ್ಜಿತ. ನಾನೇ ನಿನ್ನ ತಂದೆ, ನಾನೇ ನಿನ್ನ ತಾಯಿ, ರಾಜನು ನಿನ್ನ ಪ್ರಾಣವಧೆ ಮಾಡುವ ಮನಸ್ಸು ಮಾಡಿದ್ದಾನೆ. ನಾನು ಭಗವಂತನಿಂದ, ಬ್ರಹ್ಮನಿಂದ ರಾಜರ್ಷಿತ್ವವನ್ನು ಪಡೆದಿದ್ದೇನೆ. ನಾನು ನಿನ್ನ ಪ್ರಾಣವನ್ನು ಉಳಿಸುತ್ತೇನೆ. ನೀನು ನಿರ್ಭಯವಾಗಿ ನನ್ನ ಸಂಗಡ ಬಾ. ತಿಳಿದುಕೊ, ವಿಶ್ವಾಮಿತ್ರನ ಪ್ರತಿಜ್ಞೆಯು ಎಂದಿಗೂ ಭಂಗವಾಗುವುದಿಲ್ಲ.

ಮನಃ—ಅಪ್ಪಾ, ಅಪ್ಪಾ, ನನ್ನಪ್ರಾಣ ಉಳಿಯುತ್ತದೆ

ಯೆ ? ನನಗೆ ಭಯದಿಂದ ಮನಸ್ಸು ಅದರುತ್ತಿದೆ. ನಾನು ಸತ್ತರೆ ನನಗೆ ಗತಿಯೇನು ? ನಾನು ಪ್ರಾಣ ಬಿಡಲಾರೆ. ನನಗೆ ಬಲಿ ಕಣ್ಣಿಗೆ ಕಟ್ಟಿದ ಹಾಗೆ ಇದೆ- ರುಂಡ ಮುಂಡದಿಂದ ಬೇರೆಯಾಗಿ ಬಿದ್ದು ಹೋಗುತ್ತದೆ. ಆಮೇಲೆ ನಡೆಯುವದಿಲ್ಲ, ನೋಡು ವುದೂ ಇಲ್ಲ. ಮರಣ ಬಹುಭಯಂಕರ-ಬಹು ಭಯಂಕರ.

ವಿಶ್ವಾ—ನಿರ್ಭಯವಾಗಿ ಬಾ. ನನ್ನ ಹತ್ತಿರಇರುವಾಗ ಯಮನೂಕೂಡ ನಿನ್ನನ್ನು ಮುಟ್ಟಲು ಸಮರ್ಥ ನಾಗಲಾರ. ನೀನು ಈಗ ನನ್ನಮಗ, ನಿನಗೆ ಮುಂಗ ಳನಾದರೆ ನನಗೆ ಬ್ರಹ್ಮರ್ಷಿತ್ವಕ್ಕಿಂತಲೂ ಹೆಚ್ಚಿನ ಸ್ಥಾನ ದೊರೆತಹಾಗೆ.

(ಎಲ್ಲರೂ ಹೋಗುವರು.)

## ೫— ವನ.

ವೇದಮಾತೆ-ಸುನೇತ್ರೆಯರು

ವೇ—ಅಮ್ಮಾ, ನೀನೆಲ್ಲಿಗೆ ಹೋಗುತ್ತಿ ?

ಸು—ನನಗೆ ಗೊತ್ತಾದ ಸ್ಥಳ ಯಾವುದೂ ಇಲ್ಲವಮ್ಮ. ನಾನು ಯಜ್ಞೇಶ್ವರನ ಅಪ್ಪಣೆಯಂತೆ ರಾಜ್ಯವನ್ನು ಬ್ರಾಹ್ಮಣರಿಗೆ ದಾನಮಾಡಿದೆ. ಪತಿಯ ಹತ್ತಿರ ಹೋಗಕೂಡದೆಂದು ಅಗ್ನಿದೇವನು ನಿಷೇಧಿಸಿದ್ದಾನೆ. ಯಾವುದಾದರೊಂದು ನಿರ್ಜನ ಪ್ರದೇಶದಲ್ಲಿ ಪತಿಯ

ಧ್ಯಾನದಲ್ಲಿ ಮಗ್ನಳಾಗಬೇಕೆಂದಿದೇನೆ. ಪತಿಯು ಬ್ರಹ್ಮಾರಾಧನೆಯಲ್ಲಿ ತೊಡಗಿದ್ದಾನೆ. ನನಗೆ ಬ್ರಹ್ಮ ವಿಷ್ಣು, ಮಹೇಶ್ವರ, ಪರಬ್ರಹ್ಮ, ಎಲ್ಲಾ ನನ್ನಪತಿ. ಅದೃಷ್ಟದಿಂದ ಆತನ ಚರಣಗಳಲ್ಲಿ ಸ್ಥಾನ ದೊರೆತರೆ ಆತನ ಧ್ಯಾನದಲ್ಲಿ ನಿಯುಕ್ತಳಾಗುತ್ತೇನೆ.

ವೇ—ಅಮ್ಮಾ, ನಿನ್ನ ಪತಿಯಧ್ಯಾನದಿಂದಲೂ ಇನ್ನು ಪ್ರಯೋಜನವಿಲ್ಲ. ನೀನು ಆಧ್ಯಾನದ ಸಿದ್ಧಿಯನ್ನು ಪಡೆದಿದ್ದಿ. ನೀನು ಪತಿಗತಪ್ರಾಣಳು, ಅಹೋ ರಾತ್ರಿಯೂ ಪತಿಯು ನಿನ್ನ ಹೃದಯದಲ್ಲಿ ಪ್ರಕಾಶಿ ಸುತ್ತಿದ್ದಾನೆ.

ಸು—ಹಾಗಾದರೆ ತಾಯಿ ! ಪತಿವಿರಹದಲ್ಲಿ ಹೇಗೆ ಕಾಲ ವನ್ನು ಕಳೆಯಲಿ ?

ವೇ—ಪರೋಪಕಾರದಲ್ಲಿ ನಿರತಳಾಗು. ಕೈಲಾಸದಿಂದ ಸ್ವಯಂಪಾರ್ವತೀ ದೇವಿಯೇ ಬಂದು ನಿನಗೆ ಉಪ ದೇಶ ಮಾಡಿರುವಳು.

ಸು—ಯಾರಮ್ಮಾ ? ನನಗೆ ಯಾರೂ ಉಪದೇಶ ಕೊಡ ಲಿಲ್ಲವಲ್ಲ.

ವೇ—ಉಪದೇಶ ಕೊಟ್ಟಳು. ನೀನು ಸ್ವಪ್ನವೆಂದು ಭಾವಿಸಿ ಆ ಉಪದೇಶವನ್ನು ಉಪೇಕ್ಷೆ ಮಾಡಿದೆ,

ಸು—ಹೌದು, ತಾಯಿ, ಸ್ವಪ್ನದಲ್ಲಿ ಅಪೂರ್ವವಾದ ನಾರೀಮೂರ್ತಿಯನ್ನು ನೋಡಿದೆ, ಜ್ಞಾಪಕಕ್ಕೆ ಬಂತು.

ವೇ—ಸತೀದೇವಿಯೇ ದರ್ಶನ ಕೊಟ್ಟದ್ದು.

ಸು—ಅಮ್ಮ, ನಿಜವಾಗಿಯೂ ಅದು ಸ್ವಪ್ನ. ಇಲ್ಲದೇ ಇದ್ದರೆ ಸತೀದೇವಿಯ ಬಾಯಿಂದ ಅಸತ್ಯವಾದ ಮಾತನ್ನು ಕೇಳತಕ್ಕದ್ದುಂಟೆ? ಪಾಷಾಣದಲ್ಲಿ ಪ್ರಾಣವನ್ನು ಬರುವಂತೆ ಮಾಡುವುದು ಹೇಗೆ?

ವೇ—ಅಮ್ಮಾ, ಪತಿವ್ರತೆಯ ಸ್ಪರ್ಶದಿಂದ ಪಾಷಾಣ ಪ್ರಾಣಳಾದ ರಮಣಿಯ ಮನಸ್ಸು ಜಾಗರಿತವಾಗುತ್ತದೆ.

ಸು—ತಾಯಿ, ನಾನು ಜ್ಞಾನಶೂನ್ಯಳು, ನಿನ್ನಮಾತೂ ನನಗೆ ಸರಿಯಾಗಿ ಅರ್ಥವಾಗುವುದಿಲ್ಲ.

ವೇ—ಮಗಳೆ! ಕೇಳು. ಪ್ರೇಮವನ್ನೇ ಕಾಣದ ಮನಸ್ಸು ಪಾಷಾಣವೇ. ಯಾವ ರಮಣಿಯು ಕುಲಕಳಂಕಿನಿಯಾಗಿ ಪತಿಯ ಪಾದಕಮಲಗಳಲ್ಲಿ ಜೀವನ, ಯೌವನ, ಪ್ರಾಣಗಳನ್ನು ಸಮರ್ಪಿಸದೆ, ಪತಿಧ್ಯಾನವನ್ನು ಕಂಡರಿಯದೆ ಇರುವಳೋ, ಆ ರಮಣಿಯು ಬದುಕಿದ್ದರೂ ಪಾಷಾಣದ ಬಾಳಿಕೆಯಂತೆಯೇ. ಕೊನೆಗೆ ಅವಳು ಶಿಲಾ ಶರೀರವನ್ನೇ ಪಡೆಯುವಳು. ಆಸೆಯೆಂಬ ಬೆಂಕಿಯು ಯುಗಯುಗಾಂತರಗಳವರೆಗೂ ಸ್ವಲ್ಪವೂ ತಗ್ಗದೆ ಪ್ರಜ್ವಲಿಸುತ್ತಲೇ ಇರುವುದು. ಅಸತಿಯರಿಗೆಂತಹ ಶಿಕ್ಷೆ! ಎಲೈ ಸಾಧ್ವಿಯೆ! ಪತಿಯಿರುವಲ್ಲಿಯೇ ಬಳಲಿದರೂ ಕಾತರಳಾಗದೆ ಅವನ ಧ್ಯಾನದಲ್ಲಿಯೇ ನಿರತಳಾಗಿರುವ ನಿನಗೆ ನಾನು ದರ್ಶ

ನವನ್ನಿತ್ತೆನು. ಕಳಂಕಿನಿಯಾಗಿ ರೂಪದಿಂದ ಗರ್ವಿತಳಾದ ಕುಲಟೆಯು ಪುರುಷರ ಮನಸ್ಸನ್ನು ಸೆಳೆದು ಉಚ್ಚ ಪಥದಲ್ಲಿ ಅವರು ಮುಂದುವರಿಯುವದಕ್ಕೆ ಅಡ್ಡಿಯಾಗುವಳು. ಇವರಿಗೆ ಉಳಿಗಾಲವಿಲ್ಲ. ವಿಧಿ ನಿಯಮದಂತೆ ಇವರು ಕಡೆಗೆ ಶಿಲೆಯಾಗುವರು.

ಸುನೇತ್ರ—ತಾಯಿ ಹೇಳು ಹೇಳು. ಪ್ರೇಮಹೀನರಾಗಿ ಶುಷ್ಕಪ್ರಾಣದಿಂದ ಹೀನ ಸ್ತ್ರೀಯರುವಾಸಮಾಡುವ ದೇಶವಾವುದು? ಪತಿಸುಖದಿಂದ ವಂಚಿತಳಾದ ಸ್ತ್ರೀಗೆ ರೂಪದಿಂದಾಗಲಿ, ಯೌವನದಿಂದಾಗಲಿ ಏನು ಪ್ರಯೋಜನ? ಪತಿಯ ಸೇವೆಯನ್ನರಿಯದವಳು ಪತಿಧ್ಯಾನವನ್ನು ಮಾಡಬಲ್ಲಳೆ? ಕೋಮಲರಾದ ರಮಣಿಯರ ಮನಸ್ಸಿನಲ್ಲಿ ಈ ಬಗೆಯ ಘೋರವಾದ ವಿಕಾರಗಳು ತಲೆದೋರುವುವೇಕೆ? ಇಂತಹ ಅಭಾಗಿನಿಯರು ಯಾವಲೋಕಕ್ಕೆ ಹೋಗುವರು? ಹೇಳು.

ವೇದ—ಮಗಳೆ! ಸ್ವರ್ಗ ಮರ್ತ್ಯ ಪಾತಾಲ ಪ್ರದೇಶಗಳಲ್ಲಿ ಅದೃಷ್ಟಾನುಸಾರವಾಗಿ ಈ ಹತ ಭಾಗ್ಯೆಯರಿಗೆ ಸ್ಥಳವು ಸಿದ್ಧವಾಗಿರುವುದು.

ಸುನೇತ್ರ—ಈಗಅದೃಷ್ಟಾನುಸಾರ, ವಿಧಿನಿಯಮವೆಂದು ಹೇಳಿದೆ. ಇಂತಹ ಕೆಟ್ಟವರನ್ನು ಸೃಷ್ಟಿಸಲು ಕಾರಣವೇನು? ತಾಯಿ! ಹೇಳು. ಬ್ರಹ್ಮನ ಸೃಷ್ಟಿಯಲ್ಲಿ ಪ್ರಯೋಜನವಿಲ್ಲದ್ದು ಯಾವುದೂ ಇಲ್ಲವೆಂದು ಕೇಳಿದ್ದೇನೆ. ಈ ಹೀನರಮಣಿಯರ ಸೃಷ್ಟಿಯಿಂದ ಏನು ಪ್ರಯೋಜನವೋ?

ವೇದ—ಮಗಳೆ ! ಭೋಗವಾಸನೆಯಿಂದ ಮಾನವರು ಈ ಶರೀರವನ್ನು ಭೋಗ ತೃಪ್ತಿಗೋಸ್ಕರ ಹೊಂದು ವರು. ಆಸೆಯು ಪೂರೈಸಿದ ಹಾಗೆಲ್ಲಾ ಧರ್ಮ ಸಂಪಾದನೆಯಾಗುವುದು. ಆಸೆಯ ತೃಪ್ತಿಯೇ ಅವರ ಸುಶಿಕ್ಷಣಕ್ಕೆ ಕಾರಣ. ಸ್ವರ್ಗದಲ್ಲಿ ಅಪ್ಸರೆಯ ರೆಂಬ ಹೆಸರಿನ ಪ್ರೇಮಹೀನರಾದ ಸ್ತ್ರೀಯರು ಇರು ವರು. ಕೊನೆಗೆ ಆಸೆಯ ವಿಷಮಯವಾದ ಫಲವು ಮನುಷ್ಯನಿಗೆ ಮನಗಾಣುವುದು. ಇವನು ಸ್ವರ್ಗ ಭ್ರಷ್ಟನಾಗುವನು. ಆಗ ಸಾವಿಗಿಂತಲೂ ಭಯಂಕ ರವಾದ ಕ್ಲೇಶಗಳನ್ನು ಅನುಭವಿಸುವನು. ಮತ್ತೆ ಗರ್ಭವಾಸದ ಯಾತನೆ. ರೋಗ, ಶೋಕ, ಮರಣ ಗಳ ಸಂಕಟ. ಕ್ರಮೇಣ, ಆಸೆಯನ್ನು ಬಿಟ್ಟ ಹೊರ ತು ಶಾಂತಿಯಿಲ್ಲವೆಂಬುದು ಸ್ಪಷ್ಟವಾಗುವುದು. ಯಾ ವ ಪಶುಸಮರಾದ ಮಾನವರು ಭೋಗ್ಯ ವಸ್ತುಗಳ ಸಂಪಾದನೆಯೇ ತಮಗೆ ಗೌರವವೆಂದು ತಿಳಿದು ದು ರಾಚಾರಗಳಲ್ಲಿ ತಮ್ಮ ಅಪಾರ ಸಂಪತ್ತುಗಳನ್ನೆಲ್ಲವ ನ್ನೂ ಹಾಳುಮಾಡಿಕೊಳ್ಳುವರೋ ಅವರಿಗಾಗಿ ಬ್ರ ಹ್ಮನು ಪ್ರೇಮಹೀನರಾದ ಕುಟಿಲ ರಮಣಿಯರನ್ನು ಈ ಲೋಕದಲ್ಲಿ ಸೃಷ್ಟಿಮಾಡಿರುವನು. ಇವರ ಸಹ ವಾಸವು ಇಹದಲ್ಲಿ ರೋಗ, ಮುಪ್ಪುಗಳನ್ನೂ ಪರ ದಲ್ಲಿ ದುಸ್ತರವಾದ ನರಕ ಯಾತನೆಯನ್ನೂ ಕೊಡು ವುದು. ಜನ್ಮ ಜನ್ಮದಲ್ಲಿಯೂ ಬಹು ಕ್ಲೇಶಗಳನ್ನು ಇವರು ಅನುಭವಿಸಿದಮೇಲೆ ಇವರಿಗೆ ಜ್ಞಾನವಿಕಾಸ

ವಾಗುವುದು. ಆಸೆಯೇ ವಿಷವೆಂದು ತಿಳಿದು ಅದನ್ನು ಬಿಟ್ಟು ಈಶ್ವರನ ಪಾದ ಕಮಲಗಳಲ್ಲಿ ಮನಸ್ಸು ಪ್ರಾಣಗಳನ್ನು ಸಮರ್ಪಿಸುವರು. ಈ ಮಾನವರ ಮೋಹಿನಿಯರು ಪಾಪವನ್ನು ಹಂಚಿ ಕೊಡತಕ್ಕವರು. ಇವರು ಕೊನೆಗೆ ಪಾಷಾಣ ಶರೀರವನ್ನು ಹೊಂದಿ ರಸಾತಲದ ಒಂದು ಮೂಲೆಯಲ್ಲಿ ಕಗ್ಗತ್ತಲೆಯಲ್ಲಿ ಭಯಂಕರವಾದ ಯಾತನೆಯನ್ನು ಅನುಭವಿಸುತ್ತಾ ಬಿದ್ದಿರುವರು.

ಸುನೇತ್ರೆ—ತಾಯೆ ! ದುಃಖ ಸಮುದ್ರದಲ್ಲಿ ಮುಳುಗಿರುವ ಈ ರಮಣಿಯರು ಉದ್ಧಾರವಾಗುವ ದಾರಿ ಯಾವುದು ?

ವೇದ—ಸಾಧ್ವಿಯರ ಕರುಣೆ, ಸಾಧ್ವಿಯರ ಸೇವೆ- ಇವೇ ಇವರ ಉದ್ಧಾರಕ್ಕೆ ಇರುವ ಮುಖ್ಯವಾದ ಉಪಾಯಗಳು. ಸಾಧ್ವಿಯರ ಸೇವೆಯತ್ತ ಮನಸ್ಸು ತಿರುಗಿದ ಕೂಡಲೆ ಕೆಟ್ಟ ಯೋಚನೆಗಳು ಓಡಿ ಹೋಗುವುವು. ಸಾಧ್ವಿಯರ ಧ್ಯಾನದಿಂದ ಜೀವನವು ಪವಿತ್ರವಾಗುವುದು. ಸಾಧ್ವಿ ಸೇವೆಯ ಮಹಾಪುಣ್ಯ ಫಲದಿಂದ ಈ ಪಾಷಾಣದಲ್ಲಿಯೂ ಸುಜೀವನವು ತಲೆ ದೋರುವುದು. ಅದರಿಂದಲೇ ಮಗಳೆ ! ಪಾಷಾಣಿಯರನ್ನು ಉದ್ಧಾರಮಾಡಲು ಬೇಕಾದ ವಿಷಯವನ್ನು ನಿನಗೆ ಉಪದೇಶಿಸಲು ನಾನೇ ಬಂದಿರುವೆನು.

ಸುನೇತ್ರೆ—ತಾಯೆ ! ನಾನೆಲ್ಲರಿಗೂ ಕಿಂಕರಳು. ಕಳಂಕಿನಿಯರನ್ನು ಸನ್ಮಾರ್ಗಕ್ಕೆ ತರುವ ಭಾರವನ್ನು ನನ್ನ ಮೇಲೇಕೆ ಹೊರಿಸಿದೆ? ಸಾಧ್ವಿಯರ ಪಾದ ರಜಸ್ಪರ್ಶದಿಂದ ಕಳಂಕಿಗಳು ನಿಷ್ಕಳಂಕಿಗಳಾಗುವರು.

ವೇದ—ಚೈತನ್ಯದೊಡನೆಯೇ ಚೈತನ್ಯವು ಕಲೆಯುವುದು. ನೀನೆ ಆದರ್ಶ ಸತಿಯಾಗಿದ್ದೀಯೆ. ಸಂಸಾರದಲ್ಲಿ ಸತೀತ್ವದ ಪ್ರಭಾವವನ್ನು ಚೆನ್ನಾಗಿ ಅರಿತವರಿಗೆ ಮಾತ್ರ ಭೂಲೋಕವೇ ಸ್ವರ್ಗಲೋಕವಾಗುವುದು. ನಿನ್ನೀ ಸಂಸಾರವು ಬಹಳ ಗೌರವ ಸ್ಥಾನವನ್ನು ಪಡೆಯುವುದು. ವಿಶ್ವಾಮಿತ್ರನು ಬ್ರಹ್ಮರ್ಷಿತ್ವವನ್ನು ಸಂಪಾದಿಸುವನು. ನೀನೇ ಅವನ ವಿದ್ಯಾಶಕ್ತಿ. ನೀನು ಪುಣ್ಯವಂತೆ. ಉಚ್ಚ ಕಾರ್ಯಗಳಲ್ಲಿ ವಿದ್ಯಾಶಕ್ತಿಯ ಸಹಾಯವು ಅಷ್ಟಿಷ್ಟೆಂದು ಹೇಳಲಾಗುವುದಿಲ್ಲ. (ವೇದಮಾತೆಯು ಹೋಗುವಳು)

ಸುನೇತ್ರೆ—ತಾಯೆ ! ನಿನ್ನನ್ನು ಗುರ್ತುಹಿಡಿದೆ. ನಿನಾಜ್ಞೆಯನ್ನು ಶಿರಸಾವಹಿಸಿ ನಡೆಯುವೆನು.

(ಹೋಗುವಳು)

———

## ೬. ಹಿಮಾಲಯ ಪರ್ವತದಲ್ಲಿ ವನ.

### ರಂಭೆಯ ಶಿಲಾಮೂರ್ತಿ.

(ಊರ್ವಶಿ, ಘೃತಾಚಿ ಮುಂತಾದ ಅಪ್ಸರ ಸ್ತ್ರೀಯರ ಪ್ರವೇಶ.)

ಊರ್ವಶಿ—ಸಖಿ! ಇತ್ತ ನೋಡು. ಇದೆಂತಹ ಶೋಚನೀಯವಾದ ಬದಲಾವಣೆ! ಆ ಕೋಮಲವಾದ ದೇಹವು ಕಠಿಣವಾದ ಶಿಲೆಯಾಗಿ ಹೋಗಿದೆ. ಯಾವಾಗಲೂ ಲಾವಣ್ಯ ಜಲವು ಸಂಗೀತ ಸಾಗರದಲ್ಲಿ ಉಕ್ಕಿ ಹರಿಯುತ್ತಿತ್ತು. ಈ ಮುಖದಲ್ಲಿ ಈಗ ಕಾಂತಿಯಿಲ್ಲ. ಮೂರ್ತಿಯು ತಣ್ಣಗಿದೆ. ಯೋಗಿಗಳ ಮನಸ್ಸನ್ನೂ ಗೆಲ್ಲುತ್ತಿದ್ದ ಕಮಲದಂತಹ ಚಂಚಲವಾದ ಕಣ್ಣುಗಳು ಭಾವವಿವರ್ಜಿತವಾಗಿ ಶಿಲಾಮಯವಾಗಿ ಹೋಗಿವೆ. ಹಿಮ್ಮಡಿಯವರೆಗೂ ಬೆಳೆದು ಮೃದುವಾಗಿ ಪರಿಮಳಿಸುತ್ತಿದ್ದ ಕೇಶರಾಶಿಯ ಆಕಾರ ಮಾತ್ರ ಉಳಿದಿದೆ. ವೈರಾಗ್ಯವನ್ನು ಅಟ್ಟಸಿಕೊಂಡು ಹೋಗುತ್ತಿದ್ದ ಅವಳ ಅಧರವನ್ನು ದುಂಬಿಗಳು ಆಕ್ರಮಿಸುತ್ತಿದ್ದವು. ಈಗ ಅದು ಶಿಲಾಮಯವಾಗಿದೆ. ಇದೆಂತಹ ಭಯಂಕರವಾದ ಪರಿವರ್ತನ!

ಘೃತಾಚಿ—ಈ ತರದ ಪರಿವರ್ತನವು ಎಂದೂ ನಮಗೆ ಸಂಭವಿಸುವುದಿಲ್ಲವೆಂದು ಯಾರು ಹೇಳಬಲ್ಲರು? ಈ ಅಪ್ಸರ ಶರೀರಕ್ಕೆ ಶತಸಹಸ್ರ ಧಿಕ್ಕಾರವಿರಲಿ! ಈ ಚಿರ ಯೌವನಕ್ಕೂ ಸುರೂಪಕ್ಕೂ ಕೋಟಿಧಿಕ್ಕಾ

ರವಿರಲಿ ! ಸೂಳೆಯರಂತೆ ವೇಷಭೂಷಾದಿಗಳು. ಸೇವೆಯೇ ವ್ಯಭಿಚಾರ, ಶಾಪವನ್ನು ಹೊಂದುವುದೇ ನಿಯತವಾದ ಫಲ. ಅದು ಬ್ರಹ್ಮನ ಸೃಷ್ಟಿ. ಸಖಿ ! ಈ ಯಾತನೆಯುನ್ನು ಸಹಿಸುವುದು ಕಷ್ಟ.

ಊರ್ವಶಿ—ಸಮಾಚಾರವನ್ನು ಕೇಳಿದೆಯಾ ಸಖಿ? ಇನ್ನೆಷ್ಟು ದಿನಕ್ಕೆ ಶಾಪದಿಂದ ಬಿಡುಗಡೆಯನ್ನು ಹೊಂದಿ ತನ್ನ ಲಾವಣ್ಯ ಸಂಗೀತಗಳಿಂದ ದೇವ ಸಮಾಜವನ್ನು ಮುಗ್ಧವಾಗುವಂತೆ ಮಾಡುವುದು? ನೃತ್ಯದಲ್ಲಿ ಕಿಂಕಿಣಿಯರವದಿಂದ ಪುತ್ತೆ ದೇವರಾಜನು ಅವಳನ್ನು ಮೋಹಿಸುವುದೆಂದು? ರಂಭೆಯೊಡನೆ ನಾವೆಲ್ಲರೂ ನಂದನ ವನದಲ್ಲಿ ವಿಹರಿಸುವುದೆಂದು?

ಘೃತಾಚಿ—ಹಣೆಯಲ್ಲಿ ಏನೇನನ್ನು ಬರೆದಿದೆಯೆಂಬುದನ್ನು ಯಾರು ಬಲ್ಲರು? ಸಾಧ್ವಿಯ ಸ್ಪರ್ಶದಿಂದ ರಂಭೆಯ ಶಾಪ ವಿಮೋಚನೆಯಾಗುವುದೆಂದು ಸುರಲೋಕದಲ್ಲಿ ಕೇಳಿದ್ದೆನು. ಈ ಅಪ್ಸರ ಜನ್ಮವು ಎಷ್ಟು ಪಾಪಮಯವಾದದ್ದೆಂಬುವುದನ್ನು ಹೇಳಲಾಗುವುದಿಲ್ಲ.

ಊರ್ವಶಿ—ನಡೆ. ಸಖಿ ! ಹೋಗೋಣ. ಯಾರು ಇಲ್ಲಿ ಬರುತ್ತಿರುವವರು?

ಘೃತಾಚಿ—ಇಲ್ಲಿಗೆ ಬರುವವರಿನ್ನು ಯಾರು? ಯಾವನೋ ಒಬ್ಬನು ತಪಸ್ವಿಯು ಸಾಯಲು ಬರುತ್ತಾನೆ. ನಮ್ಮನ್ನು ನೋಡಿ ಮದನ ಬಾಣದಿಂದ ಪೀಡಿತನಾ

ಗುತ್ತಾನೆ. ಕೊನೆಗೆ ಶಾಪವನ್ನು ಕೊಟ್ಟು ತನ್ನ ಋಷಿತ್ವವನ್ನು ನಮಗೆ ತಿಳಿಸುತ್ತಾನೆ! ಈ ಶಕ್ತನ ಮೂರು ಕುಲದವರೂ ಮುಕ್ತರೇ. ಇವನಿಂದ ಮನ್ಮಥನನ್ನೇನು ಮಾಡುವುದಕ್ಕೂ ಆಗಲಿಲ್ಲ. ತನ್ನ ಮನಸ್ಸನ್ನು ಸ್ಥಿರವಾಗಿಟ್ಟು ಕೊಳ್ಳಲಾಗಲಿಲ್ಲ. ನಡೆ. ಸರಿದುಹೋಗೋಣ. ಯಾವುದೋ ಸತ್ತ ಹೆಣ ನಮ್ಮನ್ನುನೋಡಿ ದಾಡಿಯನ್ನು ನೀವಿಕೊಂಡು "ಸುಂದರಿ! ಕೃಪೆಮಾಡು. ನನ್ನ ಕುಟೀರಕ್ಕೆ ಬಾ" ಎನ್ನುವುದು, ನಮ್ಮಿಂದ ಎಷ್ಟು ಮಂದಿ ಹತಭಾಗ್ಯರಿಗೆ ಸಾವು!-

ಊರ್ವಶಿ—ತಂಗಿ! ಅಲ್ಲ. ಅಲ್ಲ. ತಪಸ್ವಿನಿ ಎಂದು ತೋರುತ್ತದೆ.

ಘೃತಾಚಿ—ಇಲ್ಲ. ಇಲ್ಲ. ಯಾವುದೋ ಮುದಿ ಹೆಣ ಇದೆ ಅವಳ ಜೊತೆಯಲ್ಲಿ. ನಮ್ಮನ್ನು ನೋಡಿದ ಕ್ಷಣವೇ ಹಲ್ಲುಗಿರಿದು ಪ್ರೇಮ ಪ್ರಾರ್ಥನೆಗೆ ಆರಂಭ. ನೋಡು. ನೋಡು. ಈ ಮುದಿಹೆಣ ತಪಸ್ವಿನಿಯೊಡನೆ ಪ್ರೇಮಾಲಾಪ ಮಾಡುತ್ತಿಲ್ಲವೇ ನೋಡು. ಬಂತು. ಬಂತು. ಅವಿತುಕೊಳ್ಳೋಣ ನಡೆ. ಬಂದುಬಿಟ್ಟಿತು.

(ಎಲ್ಲರೂ ಒಳಕ್ಕೆ ಹೋಗುವರು)

(ಸುನೇತ್ರೆಯೂ ಮತ್ತು ಬ್ರಾಹ್ಮಣ ವೇಷಧಾರಿಯಾದ ಧರ್ಮರಾಜನೂ ಬರುವರು.)

ಧರ್ಮರಾಜ—ಮಗಳೆ! ಈ ವನಕ್ಕೆ ನಿನ್ನನ್ನು ಬರಹೇಳಿ

ದವರು ಯಾರು? ಈ ವನವು ಭಯಂಕರವಾದ ಶಾಪಕ್ಕೆ ಗುರಿಯಾಗಿದೆ. ಇಲ್ಲಿಗೆ ಯಾರು ಬಂದರೂ ಕಲ್ಲಾಗಿ ಹೋಗುವರು. ಇಲ್ಲಿ ನೋಡು. ಒಬ್ಬಳು ಪ್ರಾಯದವಳು ಕಲ್ಲಾಗಿದ್ದಾಳೆ.

ಸುನೇತ್ರೆ—ಪ್ರಭು! ಎಷ್ಟು ದೂರದಲ್ಲಿ?

ಧರ್ಮ—ನೋಡಲಿಲ್ಲವೆ? ಇದೋ!

ಸುನೇತ್ರೆ—ನಮಸ್ಕಾರಮಾಡುತ್ತೇನೆ. ನಾನು ಹೋಗುತ್ತೇನೆ.

ಧರ್ಮ—ತಾಯೆ! ಎಲ್ಲಿಗೆ ಹೋಗುವೆ? ಹೇಳು.

ಸುನೇತ್ರೆ—ನಾನು ಈ ಶಿಲಾ ಮೂರ್ತಿಯನ್ನು ಮುಟ್ಟುತ್ತೇನೆ.

ಧರ್ಮ—ಅದೇನು? ಏನು ಹೇಳಿದೆ? ಅವಳು ಕಳಂಕಿನಿ. ಮಹಾ ಪಾಪವನ್ನು ಮಾಡಿ ಕಲ್ಲಾಗಿದ್ದಾಳೆ. ನೀನು ಸಾಧ್ವಿ. ನೀಚಳಾದ ಕುಲಟೆಯನ್ನು ಮುಟ್ಟಬೇಡ.

ಸುನೇತ್ರೆ—ಅಯ್ಯಾ ಬ್ರಾಹ್ಮಣ! ಕುಲಟೆಯ ನಡತೆಯು ನೀಚವಾದುದು. ನಿಜ. ಆದರೆ ಏನಾದರೂ ಆಗಲಿ, ಸಂಕಟದಲ್ಲಿರುವವರ ಸಂಕಟವನ್ನು ಸಾಧ್ಯವಾದಷ್ಟು ಮಟ್ಟಿಗೆ ತಪ್ಪಿಸುವುದು ಎಲ್ಲರಿಗೂ ಕರ್ತವ್ಯ. ಪಾಪಿಯ ಗುಣದೋಷಗಳನ್ನು ವಿಮರ್ಶೆ ಮಾಡುವವರು ನಾವಲ್ಲ. ಎಲ್ಲರ ದೇಹದಲ್ಲಿಯೂ ನಾರಾ

ಯಣನಿದ್ದಾನೆಂಬ ಜ್ಞಾನದಿಂದ ಎಲ್ಲರ ಸೇವೆಯ
ನ್ನೂ ಮಾಡುವುದು ನಮ್ಮ ಕರ್ತವ್ಯ.

ಧರ್ಮ—ಹೋಗಬೇಡ. ಹೋಗಬೇಡ. ಅಪವಿತ್ರರನ್ನು
ಮುಟ್ಟಿ ಅಪವಿತ್ರಳಾಗಬೇಡ. ಅವಳಂತೆಯೇ ನೀ
ನೂ ಕಲ್ಲಾಗುವೆ.

ಸುನೇತ್ರೆ—ಎಲೈ ಬ್ರಾಹ್ಮಣನೆ! ನನ್ನ ಮನಸ್ಸು ಸ್ಥಿರ
ವಾಗಿ ನಿಂತಿರುವುದು ನನ್ನ ಸ್ವಾಮಿಯ ಚರಣದಲ್ಲಿ.
ಕೇವಲ ಸ್ಪರ್ಶದಿಂದ ಪತಿ ಪರಾಯಣಳೂ ಅಪವಿತ್ರ
ಳಾಗುವಂತಹ ಅಪವಿತ್ರರು ಈ ಪೃಥ್ವಿಯಲ್ಲಿ ಯಾರಿ
ದ್ದಾರೆ? ನೀನು ವೃದ್ಧ ಬ್ರಾಹ್ಮಣ. ಪರರಿಗೆ ಹಿತ
ವಾದ ಕಾರ್ಯಕ್ಕೆ ಅಡ್ಡಿ ಮಾಡಬೇಡ. ಸಾಧ್ವಿ
ಯಾದ ಪ್ರಾಣ ಮಯಿಯಾದ ತಾಯಿಯ ಉಪದೇ
ಶದಿಂದ ನಾನೂ ಪ್ರಾಣಮಯಿಯೇ. ನಾನೆಂದಿಗೂ
ಕಲ್ಲಾಗುವುದಿಲ್ಲ.

(ಶಿಲಾಮೂರ್ತಿಯ ಹತ್ತಿರಕ್ಕೆ ಹೋಗುವಳು)

ಧರ್ಮ—ಈಗಲಾದರೂ ನಿಲ್ಲು. ಮುಟ್ಟಬೇಡ.

ಸುನೇತ್ರೆ—ಶಿಲಾಮೂರ್ತಿಯೆ! ನೀನು ಯಾರೇ ಆಗಿರು,
ನೀನು ಘೋರ ಪಾಪದಿಂದ ಶಿಲೆಯಾಗಿರುವುದಾದರೆ,
ನಾನು ನಿನ್ನನ್ನು ಮುಟ್ಟಿ ನನ್ನ ಪತಿ ಸೇವೆಯ ಪುಣ್ಯ
ಫಲವನ್ನು ನಿನಗೆ ಕೊಟ್ಟಿರುವೆನು. ಶಿಲಾ ದೇಹವನ್ನು
ಬಿಟ್ಟು ಪೂರ್ವಶರೀರವನ್ನು ಹೊಂದು.

ರಂಭೆ—(ಚೇತನಳಾಗಿ) ಋಷಿರಾಜ! ಋಷಿರಾಜ! ನನ್ನನ್ನು ಕ್ಷಮಿಸು. ಕ್ಷಮಿಸು. ನನ್ನ ತಪ್ಪಲ್ಲ.

ಸುನೇತ್ರೆ—ಭಯಪಡಬೇಡ. ಸ್ಥಿರಳಾಗು. ನೀನು ಶಾಪದಿಂದ ಬಿಡುಗಡೆಯನ್ನು ಹೊಂದಿರುವೆ. ನಿನ್ನ ವಾಸಸ್ಥಾನಕ್ಕೆ ಹೊರಡು.

ರಂಭೆ—ತಾಯಿ! ಸಾಧ್ವಿ! ನೀನು ಯಾರು? ಈ ಭಯಂಕರವಾದ ಕಾಡಿಗೆ ಬಂದು ನನ್ನಲ್ಲಿ ಕೃಪೆಮಾಡಿ ನನ್ನನ್ನು ಉದ್ಧಾರಮಾಡಿರುವೆ. ದೇವಿ! ನಿನ್ನ ಪವಿತ್ರ ಸ್ಪರ್ಶದಿಂದ ಭೂಲೋಕದಲ್ಲಿ ಸತಿಯಾಗಿ ಹುಟ್ಟುವಂತೆ ವರವನ್ನು ಕೊಡು.

ಸುನೇತ್ರೆ—ನಿನ್ನ ಇಷ್ಟಾರ್ಥವನ್ನು ನಾರಾಯಣನು ಪೂರೈಸಿ ಕೊಡುವನು. ತಾಯಿ! ನಿನಗೇಕೆ ಈ ದುರ್ದೆಶೆಯು ಬಂದಿತು?

ರಂಭೆ—ಕೋಪಿಷ್ಠನಾದ ವಿಶ್ವಾಮಿತ್ರನು ನನಗೆ ಶಾಪವನ್ನು ಕೊಟ್ಟದ್ದನು. ಅವನು ಬಹಳ ನಿಷ್ಕರುಣನಾದ ಋಷಿ, ಲೇಶವಾದರೂ ದಯೆಯಿಲ್ಲ.

ಸುನೇತ್ರೆ—ತಾಯೆ! ನೀನು ನನ್ನಲ್ಲಿ ಕೃಪೆಯಿಟ್ಟು ನಿನಗೆ ಋಷಿಯು ಶಾಪವನ್ನು ಕೊಟ್ಟದ್ದನ್ನು ಮರೆತುಬಿಡು. ನಾನು ಆತನ ಪತ್ನಿ, ಇದೇ ನಿನ್ನಲ್ಲಿ ನನ್ನ ಪ್ರಾರ್ಥನೆ.

ರಂಭೆ—ತಾಯೆ! ಋಷಿರಾಜನಾದ ವಿಶ್ವಾಮಿತ್ರನಿಗೆ ಅವನ ತಪಸ್ಸಿಗೆ ವಿಘ್ನಮಾಡಲು ನಾನಾಗಿ ಬಂದವಳ

ಲ್ಲವೆಂದು ತಿಳಿಸು, ಇದು ನಿನ್ನಲ್ಲಿ ನನ್ನ ಪ್ರಾರ್ಥನೆ. ದೇವೇಂದ್ರನ ಅಪ್ಪಣೆಯಂತೆ ವಿಶ್ವಾಮಿತ್ರನ ತಪೋಭಂಗಕ್ಕೆ ಬಹಳವಾಗಿ ಪ್ರಯತ್ನಮಾಡುತ್ತಿದ್ದೆ. ಸಾಧ್ವಿ! ನೀನು ದಯಾಮಯಿ. ನಿನ್ನ ಇಷ್ಟಾರ್ಥವನ್ನು ದಯಾಮಯಳಾದ ಜಗಜ್ಜನನಿಯು ಕೈಗೂಡಿಸುವಳು.

ಸುನೇತ್ರೆ—ರಮಣಿ! ನಿನ್ನ ಆಶೀರ್ವಾದದಿಂದ ನನ್ನ ಇಷ್ಟಾರ್ಥವು ಕೈಗೂಡುವುದು.

ಧರ್ಮರಾಜ—ಸಾಧ್ವಿ! ನಾನು ಧರ್ಮರಾಜ. ನಿನಗೆ ಧರ್ಮದಲ್ಲಿರುವ ಪ್ರೀತಿಯನ್ನು ಪರೀಕ್ಷಿಸಲು ಬಂದಿದ್ದೆ. ನನಗೆ ಬಹಳ ಸಂತೋಷವಾಯಿತು. ನಿನ್ನ ಮನೋಭೀಷ್ಟವು ಕೈಗೂಡಲಿ.

(ಧರ್ಮರಾಜನು ಹೋಗುವನು. ಇಂದ್ರನು ಬರುವನು)

ಇಂದ್ರ—ತಾಯೆ! ನೀನು ನನ್ನನ್ನು ಅನುತಾಪಾನಲನಿಂದ ಕಾಪಾಡಿರುವೆ. ನನ್ನ ಅಪ್ಪಣೆಯನ್ನು ನೆರವೇರಿಸಲು ಬಂದು ರಂಭೆಯು ಶಾಪಗ್ರಸ್ತಳಾದಳು. ನಾನು ದೇವರಾಜನಾದ ಇಂದ್ರ. ಬೇಕಾದ ವರವನ್ನು ಬೇಡು.

ಸುನೇತ್ರೆ—ಸುರಪತಿ! ನನ್ನ ಸ್ವಾಮಿಯ ಇಷ್ಟಾರ್ಥವು ಕೈಗೂಡುವಂತೆ ಆಶೀರ್ವಾದ ಮಾಡು.

ಇಂದ್ರ—ಖಂಡಿತವಾಗಿಯೂ ಕೈಗೂಡುವುದು. ನೀನು

ಯಾರ ಸಹಧರ್ಮಿಣಿಯೋ ಅವನ ಪುಣ್ಯಕಾರ್ಯಗಳಿಗೆ ದೇವರಾಜನಾದ ಇಂದ್ರನೇ ಸಹಾಯ. ಬ್ರಹ್ಮಣ್ಯದೇವನೇ ಅವನ ಸಂರಕ್ಷಣೆಯ ಭಾರವನ್ನು ವಹಿಸಿರುವನು. ಸತಿಯ ಪ್ರಾರ್ಥನೆಯು ಕೈಗೂಡಲಿ. ನೀನು ನನ್ನೊಡನೆ ಬಾ. ನಾನು ನಿನಗೆ ಕೊಡುವ ದ್ರವ್ಯವನ್ನು ತೆಗೆದುಕೊಂಡು ಅಂಬರೀಷ ರಾಜನ ಯಜ್ಞಕ್ಕೆ ನಡೆ. ಈ ದ್ರವ್ಯದಿಂದ ನಿನ್ನ ಸ್ವಾಮಿಯ ಮಹಾಕಾರ್ಯವು ಕೈಗೂಡುವುದು.

(ಇಂದ್ರ, ಸುನೇತ್ರೆ ಇಬ್ಬರೂ ಹೋಗುವರು)

ದೃಶ್ಯಪರಿವರ್ತನ.

(ರಂಭೆಯನ್ನು ಮಧ್ಯದಲ್ಲಿ ನಿಲ್ಲಿಸಿ ಅಪ್ಸರೆಯರೆಲ್ಲರೂ ಗಾನಮಾಡುತ್ತಾ ನರ್ತನ ಮಾಡುವರು.)

## ೭. ಅಂಬರೀಷರಾಜನ ಯಜ್ಞಭೂಮಿ.

ಅಂಬರೀಷ, ಪುರೋಹಿತ, ಶುನಶ್ಶೇಫ ಮತ್ತು ದೂತರು.

ಪುರೋಹಿತ—ಬಾ. ಲಗ್ನವು ಸಮೀಪಿಸಿತು. ಬಲಿ ಕೊಡುವ ಹುಡುಗನನ್ನು ಯೂಪಸ್ತಂಭಕ್ಕೆ ಕಟ್ಟು. (ಇನ್ನೊಬ್ಬ ಬ್ರಾಹ್ಮಣನನ್ನು ಕುರಿತು) ಕತ್ತಿಯನ್ನು ಹರಿತ ಮಾಡಿಡು. ಈಗಲೇ ಹೋಮಾಗ್ನಿಯನ್ನು ಸರಿಮಾಡು.

(ಸದಾನಂದನು ಬರುವನು.)

ಸದಾನಂದ—ಸರಿ ಸರಿ. ಅದೇ ಹುಡುಗನನ್ನು ಕರೆ

ತಂದು ಕಟ್ಟಿಹಾಕಿದ್ದಾರೆ. (ಶುನಶ್ಶೇಫನ ಕಡೆಗೆ ಮುಂದುವರಿದು) ಎಂಥಾ ದಡ್ಡನೋ ನೀನು? ನಿನಗೆ ಹೇಳಿಕೊಟ್ಟೆ, ಕಾಲುಗಳನ್ನು ಹಿಡಿದುಕೋ ಏನಾದರೂ ಬಿಡಬೇಡಾಂತ. ಹಾಗೆ ಮಾಡಲಿಲ್ಲ ?

ಶುನ—ನಾನೇನೋ ಕಾಲುಗಳನ್ನು ಹಿಡಿದುಕೊಂಡಿದ್ದೆ.

ಸದಾ—ನಿಮ್ಮಪ್ಪನ ಕಿವಿಹಿಡಿದುಕೊಂಡಿದ್ದೆಯೋ ಹುಚ್ಚ !

ಶುನ—ಇಲ್ಲ, ಸ್ವಾಮಿ ! ಅವರು ಹೇಳಿದರು "ನೀನು ನಡೆ. ನಾನು ಬರುತ್ತೇನೆ" ಎಂದು.

ಸದಾ—ಹಾಗಿದ್ದರೆ ನಡೆ ಯಮನ ದಕ್ಷಿಣದ ಬಾಗಿಲಿಗೆ. ಆ ಖಡ್ಗಪುಷ್ಪವನ್ನು ಕೊಡುತ್ತಾರೆ. ನೋಡು. (ತೆರೆಯ ಕಡೆ ನೋಡಿ) ನಿನ್ನ ಅದೃಷ್ಟ ಚೆನ್ನಾಗಿದೆ. ವಿಶ್ವಾಮಿತ್ರನು ಬರುತ್ತಿದ್ದಾನೆ. ನಡುಗುತ್ತ ನಿಲ್ಲು, ಹೇಗಾದರೂ ಕಾಪಾಡಬೇಕೆಂದು ಕೇಳಿಕೊ.

ಶುನ—ಅವರು ಬರುತ್ತಾರೆ. ನನಗೆ ಹೇಳಿದ್ದಾರೆ.

ಸದಾ—ಇಲ್ಲ. ಈ ಹುಡುಗನನ್ನು ಯಮನಿಗೆ ಸಮರ್ಪಣೆ ಮಾಡಿಬಿಡುತ್ತಾರೆ. ಇದೇನು ? ಯೂಥಪಾಲಕರ ಗೌರವ ! ದಾರಿಬಿಡಿ. ಸರಿದು ಹೋಗುತ್ತೇನೆ. ಈ ಮಗುವನ್ನು ಕತ್ತರಿಸುವುದನ್ನು ನೋಡಲಾರೆ. ಒಳ್ಳೆಯ ಸಂದರ್ಭ ಹೊಂದಿಸಿಕೊಟ್ಟದ್ದೆ. ಈಗೇನು ಮಾಡಲಿ ! ಇದೇನು ? ಹೀಗೊಂದು ಸಾಲು,

ಹಾಗೊಂದು ಸಾಲು ಕುಳ್ಳಿರಿಸಿದ್ದಾರೆ! ಈ ನೈವೇ ವ್ಯದ ತಲೆಯು ಎರಡು ಪಾಲಾದ ತಕ್ಷಣವೇ, ಓಡಿ ಬಿಡುತ್ತೇನೆ. ರಾಜದೂತರು ಸುತ್ತಲೂ ಕಾವಲು ಕಾದಿದ್ದಾರೆ. ಇಲ್ಲ, ಹಾಗೆ ಮಾಡುವುದಕ್ಕಾಗುವು ದಿಲ್ಲ. ನಮ್ಮ ರಾಜಾ ಬರುತ್ತಿದ್ದಾನೆ. ಏನಾದರೂ ಸ್ವಲ್ಪ ಮಾಡುತ್ತಾನೆ. ಮಾಡಲಾರನೆ? ಎಲ್ಲಿ? ನೋ ಡೋಣ. ಅಯ್ಯೋ! ಅಲ್ಪಾಯುಸ್ಸಿನ ಮಗುವೆ! ಈ ಹುಡುಗನಿಗೆ ಮೊದಲೇ ಹೇಳಿದೆ. ಕಾಲುಗಳನ್ನು ಹಿಡಿದುಕೋ ಬಿಡಬೇಡಾಂತ. ಈಗ ನಾನೇ ಹೋಗಿ ರಾಜನ ಕಾಲುಗಳನ್ನು ಹಿಡಿದುಕೊಳ್ಳುತ್ತೇನೆ. ಜಪ್ಪ ಯ್ಯ ಎಂದರೂ ಬಿಡುವುದಿಲ್ಲ. "ಮಗುವನ್ನು ಬದು ಕಿಸು, ಬ್ರಾಹ್ಮಣನ ಕೊಲೆಯನ್ನು ತಪ್ಪಿಸು", ಎಂ ದು ಬೇಡಿಕೊಳ್ಳುತ್ತೇನೆ. ಬೇರೆ ಉಪಾಯವೇನೂ ತೋರುವುದೇ ಇಲ್ಲ. ಇಲ್ಲಿ ರಾಶಿರಾಶಿಯಾಗಿರುವ ಭಕ್ಷ್ಯಗಳನ್ನು ಬಿಟ್ಟು ಹೋಗಬೇಕಲ್ಲಾ! ನಮ್ಮ ರಾಜಾ ಏನು ಯೋಚಿಸಿಕೊಂಡು ಬಂದಿದ್ದಾನೋ ನೋಡೋಣ. ಮಗುವನ್ನು ಬದುಕಿಸುವುದಕ್ಕೆ ಬೇರೆ ಉಪಾಯವೇ ಇಲ್ಲದಿದ್ದರೆ ಏನು ಮಾಡಲಿ? ನಾಲಿ ಗೆಯಲ್ಲಿ ನೀರು ಊರುತ್ತಿದೆ. ಯಾವುದಾದರೂ ಮರದ ಕೆಳಗಾದರೂ ಕುಳಿತು ಈ ನಾಲಿಗೆಯನ್ನು ಬಿಗಿ ಹಿಡಿಯುವುದಕ್ಕೆ ತಕ್ಕ ಯೋಗಾಭ್ಯಾಸಮಾಡು ತ್ತೇನೆ. ಇನ್ನೇನು ಸಾಧ್ಯ? ಅಯ್ಯೋ ಪಾಪ! ಈ ನಾಲಿಗೆಗೆ ನಿಮಂತ್ರಣ, ತೀರ್ಥ ಸಮಾರಾಧನೆ

ಇವೆಲ್ಲಾ ಬಹಳ ಅಪರೂಪವಾಗಿ ಹೋಯಿತು. ಸರಿ! ಮೂಗೇ! ನಿನಗೆ ವಾಸನೆ ಬರುತ್ತಿಲ್ಲವೆ? (ದೀರ್ಘವಾಗಿ ಉಸಿರೆಳೆದುಕೊಂಡು) ಹೊರಡುತ್ತೇನೆ. ಸತ್ತೆನೋ ಕೆಟ್ಟೆನೋಂತ ಓಡಿಹೋಗುತ್ತೇನೆ.

(ವಿಶ್ವಾಮಿತ್ರನು ಬರುವನು.)

ವಿಶ್ವಾಮಿತ್ರ—ಮಹಾರಾಜ! ಆಶೀರ್ವಾದವನ್ನು ಗ್ರಹಣಮಾಡು.

ಅಂಬರೀಷ—ರಾಜರ್ಷಿಗಳಿಗೆ ನಮಸ್ಕಾರ. ದಯಮಾಡಿಸಬೇಕು. ತಮ್ಮ ಆಗಮನದಿಂದ ನಮ್ಮ ಈ ಯಜ್ಞಭೂಮಿಯು ಪವಿತ್ರವಾಯಿತು.

ವಿಶ್ವಾಮಿತ್ರ—ಮಹಾರಾಜ! ಈ ಪವಿತ್ರವಲ್ಲದ ಯಜ್ಞಭೂಮಿಯು ಸ್ವಯಂನಾರಾಯಣನ ಆಗಮನದಿಂದಲೂ ಪವಿತ್ರವಾಗುವುದಿಲ್ಲ. ನಾನೆಂತಹ ಅಧಮ! ಈ ನರಬಲಿಯನ್ನು ಮಾಡಬೇಕೆಂದು ನಿನಗೆ ಹೇಳಿದವರಾರು?

ಪುರೋಹಿತ—ಏಕೆ? ಶಾಸ್ತ್ರ ಮತವನ್ನು ನಾನೇ ಹೇಳಿದವನು. ಯಜ್ಞಕ್ಕೆ ಉತ್ಸರ್ಗಮಾಡಿದ್ದ ಪಶುವು ಕಳುವಾಗಿ ಹೋಯಿತು. ನರ ಬಲಿಯನ್ನಲ್ಲದೆ ಮತ್ತಾವುದನ್ನು ಆಹುತಿ ಕೊಟ್ಟರೂ ಅಗ್ನಿಯನ್ನು ವಂಚಿಸಿದ ಹಾಗಾಗುವುದು. ರಾಜನು ಈ ಮಹಾ ಪಾಪದಿಂದ ಮುಕ್ತನಾಗುವುದು ಹೇಗೆ?

ವಿಶ್ವಾ—ಪಶುವು ಕಳುವಾಗಿರಲಿ. ಒಂದು ಪಶುವಿಗೆ ಬದಲಾಗಿ ಸಹಸ್ರ ಪಶುಗಳನ್ನು ಕೊಟ್ಟರೆ ಆಯಿತು.

ಪುರೋಹಿತ—ಇಲ್ಲ. ಮಹಾಸ್ವಾಮಿ ! ಹಾಗೆ ಮಾಡುವುದಕ್ಕಾಗುವುದಿಲ್ಲ. ತಪಸ್ಸು ಮಾಡಿ ತಾವು ರಾಜರ್ಷಿತ್ವವನ್ನು ಸಂಪಾದಿಸಿರುವಿರಿ. ಈ ಕ್ರಿಯಾಕಾಂಡವೆಲ್ಲಾ ತಮಗೆ ಚೆನ್ನಾಗಿ ಅನುಭವಕ್ಕೆ ಬಂದಿಲ್ಲ. (ಇನ್ನೊಬ್ಬ ಬ್ರಾಹ್ಮಣನನ್ನು ಕುರಿತು) ಕರೆದುಕೊಂಡು ನಡೆ. ನಡೆ. ಖಡ್ಗವು ಮನ್ತ್ರಪೂತವಾಗಿ ಸಿದ್ಧವಾಗಿದೆ. ಮಹಾರಾಜರ ಕೈಯಲ್ಲಿ ಕೊಡು. ಅಗ್ನಿದೇವತೆಯು ನರಮಾಂಸಕ್ಕಾಗಿ ನಾಲಿಗೆಯನ್ನು ನೀಡುತ್ತಿದೆ.

ಸಹಾಯಕ ಬ್ರಾಹ್ಮಣನು—ಮಹಾರಾಜ ! ಖಡ್ಗವನ್ನು ತೆಗೆದುಕೊ.

(ಅಂಬರೀಷನು ಕತ್ತಿಯನ್ನು ತೆಗೆದುಕೊಳ್ಳಲು ಕೈ ನೀಡುವನು.)

ವಿಶ್ವಾ—ಮಹಾರಾಜ ! ಸ್ವಲ್ಪ ತಾಳು. ಏತಕ್ಕಾಗಿ ಈ ನರಹತ್ಯ, ಬಾಲಕಹತ್ಯ, ಬ್ರಹ್ಮಹತ್ಯವನ್ನು ಮಾಡುವುದಕ್ಕೆ ಹೊರಟರುವೆ ? ಈ ಯಜ್ಞವನ್ನು ಮಾಡಿ ಯಾವ ವಸ್ತುವನ್ನು ಪಡೆಯಬೇಕೆಂದಿರುವೆ ? ಈ ಮಹಾಪಾತಕದಿಂದ ಮುಕ್ತನಾಗುವುದು ಹೇಗೆ ? ಸುರಥನೆಂಬ ರಾಜನು ಅಂಬಿಕೆಯ ಎದುರಿಗೆ ಒಂದು ಲಕ್ಷ ಕುರಿಗಳನ್ನು ಬಲಿಕೊಟ್ಟದ್ದು ಮಹಾ ರಾಜನಿಗೆ

ಗೊತ್ತಿರಬಹುದು. ಲಕ್ಷ ಅಸ್ತ್ರಗಳ ಪೆಟ್ಟನ್ನು ಅವನು ಸಹಿಸಬೇಕಾಗಿ ಬಂದದ್ದು, ಈ ವಧೆಯಿಂದ ಬಂದ ಪಾಪದ ಫಲವೇ. ದೇವಿಯ ಕೃಪೆಯಿಂದ ಅಸ್ತ್ರಗಳ ಪೆಟ್ಟು ಬೀಳುವುದೇನೂ ನಿಲ್ಲಲಿಲ್ಲ. ಲಕ್ಷ ಅಸ್ತ್ರಗಳು ಒಂದೇ ಕಾಲದಲ್ಲಿ ಅವನ ದೇಹದ ಮೇಲೆ ಬಿದ್ದವು. ಈ ನರಹತ್ಯದಿಂದ ಬರುವ ಮಹಾಪಾಪದಿಂದ ನಿನಗೆಂದು ಹೇಗೆ ಬಿಡುಗಡೆಯಾಗುವುದು ?

ಅಂಬರೀಷ—ರಾಜರ್ಷಿ ! ಇವನು ನನ್ನ ಪುರೋಹಿತ. ಅವನ ಆಜ್ಞೆಯನ್ನು ನಾನು ಮೀರುವುದು ಹೇಗೆ?

ವಿಶ್ವಾ—ನಿನಗೆ ಖಂಡಿತವಾಗಿಯೂ ನರಹತ್ಯವನ್ನು ಮಾಡಲೇಬೇಕೆಂಬ ಸಂಕಲ್ಪವಿರುವುದಾದರೆ. ಬಾಲಕನು ದೇವತಾರಾಧನೆಯನ್ನು ಮಾಡಲು ಅವಕಾಶವನ್ನು ಕೊಡು. (ಶುನಶ್ಶೇಫನನ್ನು ಕುರಿತು) ಬಾಲಕ ! ನಾನು ಉಪದೇಶಿಸಿರುವಂತೆ ದೇವರನ್ನು ಧ್ಯಾನಿಸು.

(ಶುನಶ್ಶೇಫನು ನಾರಾಯಣಸ್ತವವನ್ನು ಗಾನಮಾಡುವನು)

ನವೀನ ನೀರದ, ನವ ನಟವರ, ನೀಲ ನಳಿನನಯನ।
ಮಧುಸೂದನ, ಮುರಲೀಮೋಹನ, ಮಥಿತಮಾನ
ಮದನ ॥

ನಾಭನೀರಜ, ನಾಗಶಯನೇ ನಿದ್ರಿತ ನಿರಂಜನ।
ರಾಜೀವರಾಜರಾತುಲ ಚರಣಾರಾಧಿತ ಹೃದಿರಂಜನ॥

ಯಜ್ಞೇಶ್ವರ, ಯೋಗೇಶ್ವರ, ಯಮಯನ್ತ್ರಣಾಭಂ
ಜನ |
ಣ-ನಿವಾಸ, ನರಕನಾಶ, ನೀರಜಾನಯನಾಂಜನ ||
ನಾರಾಯಣ, ನಾರಾಯಣ, ನಮೋ ನಮೋ ನಾ
ರಾಯಣ |

ಪುರೋಹಿತ—ರಾಜರ್ಷಿ! ಯಜ್ಞೇಶ್ವರ ನಾರಾಯಣನು ಯಜ್ಞವನ್ನು ಪೂರ್ಣಮಾಡಲು ಶಿಲಾರೂಪನಾಗಿ ಬಂದಿದ್ದಾನೆ. ಅವನು ವಿಹಿತವಲ್ಲದ ಕಾರ್ಯವನ್ನು ಮಾಡಿ ಬಾಲಕನಿಗೆ ಆಶ್ರಯವನ್ನು ಕೊಟ್ಟು ಯಜ್ಞಕ್ಕೆ ವಿಘ್ನಮಾಡುವುದಿಲ್ಲ.

ವಿಶ್ವಾ—ರಾಜಪುರೋಹಿತರೆ! ಯಜ್ಞಪಶುವಿಗೆ ಬದಲಾಗಿ ಬಾಲಕನನ್ನು ಆಹುತಿಕೊಟ್ಟು ಯಜ್ಞವನ್ನು ಸಂಪೂರ್ಣ ಮಾಡುವುದಾದರೆ, ಈ ಬಾಲಕನಿಗೆ ಬದಲಾಗಿ ಋಷಿಯ ಮೇದಸ್ಸನ್ನು ಕೊಟ್ಟು ಯಜ್ಞವನ್ನು ಪೂರ್ತಿಮಾಡಿ. (ಅಂಬರೀಷನನ್ನು ಕುರಿತು) ಮಹಾರಾಜ! ಈ ಬಾಲಕನನ್ನು ಬಿಡಿಸಿ. ನನ್ನನ್ನು ಆ ಯೂಪಸ್ತಂಭಕ್ಕೆ ಕಟ್ಟುವಂತೆ ಆಜ್ಞೆಮಾಡು.

ಅಂಬ—ರಾಜರ್ಷಿ! ತಾವು ಎಂತಹ ಅಪ್ಪಣೆಯನ್ನು ಕೊಡಿಸಿದಿರಿ? ತಾವು ಋಷಿಗಳು—ತಮ್ಮನ್ನು ವಧೆ ಮಾಡುವುದು ಹೇಗೆ?

ವಿಶ್ವಾ—ಮಹಾರಾಜ! ನಾನು ನನ್ನ ಮನಃಪೂರ್ವಕವಾಗಿ ಈ ಶರೀರವನ್ನು ಅರ್ಪಿಸುತ್ತೇನೆ. ನನ್ನನ್ನು

ವಧೆ ಮಾಡುವುದರಿಂದ ನಿನಗೆ ಪಾಪವು ಬರುವುದಿಲ್ಲ ವೆಂದು ನಾನು ಯಜ್ಞೇಶ್ವರ ಸಾಲಗ್ರಾಮಗಳನ್ನು ಮುಟ್ಟಿ ಪ್ರಮಾಣಮಾಡಿ ಹೇಳುತ್ತೇನೆ. ಭಯ ದಿಂದ ನಡುಗುತ್ತಿರುವ ಈ ಬಾಲಕನನ್ನು ಕೊಂದರೆ ನಿಶ್ಚಯವಾಗಿಯೂ ಪಾಪದ ಫಲವನ್ನು ಅನುಭವಿಸ ಲೇ ಬೇಕಾಗುವುದು. ನನ್ನನ್ನು ಕೊಂದರೆ ನೀನು ಪಾಪಿಯಾಗುವುದಿಲ್ಲ. ನಿನ್ನ ಯಜ್ಞವೂ ಪೂರ್ಣವಾ ಗುವುದು. ನಿನಗೆ ಮಂಗಳವಾಗಲಿ! ಈ ಬಾಲಕ ನಿಗೆ ಬದಲಾಗಿ ನನ್ನನ್ನು ವಧೆಮಾಡು.

ಪುರೋ—ವಿಶ್ವಾಮಿತ್ರ! ನಿನ್ನ ಉದಾರತೆಯು ಅತ್ಯಂತ ಆಶ್ಚರ್ಯಕರವಾಗಿರುವುದು. ಒಳ್ಳೆಯದು. ನೀನು ಹೇಳಿದಂತೆ ನಿನ್ನನ್ನೇ ಪಶುವಾಗಿ ತೆಗೆದುಕೊಳ್ಳು ವೆನು. ಇಲ್ಲಿ ಉತ್ಸರ್ಗ ಮಾಡಿರುವುದನ್ನೆಲ್ಲಾ ತಿಂದು ಯೂಪಸ್ತಂಭದ ಮೇಲೆ ತಲೆಯಿಡು.

ಸದಾ—ಇದನ್ನೆಲ್ಲಾ ನಾನು ತಿನ್ನುತ್ತೇನೆ. (ಅಂಬರೀ ಷನನ್ನು ಕುರಿತು) ರಾಜಾ, ನಾನು ಬಲಿಯಾಗಲು ಒಪ್ಪಿ ಹೋಗುತ್ತೇನೆ. ಸ್ವಲ್ಪ ತಾಳು. ಈ ಎರಡು ಒಬ್ಬಟ್ಟನ್ನು ತಿಂದು ಬಿಡುತ್ತೇನೆ. ಆ ಮೇಲೆ....

ಪುರೋ—ಯಾರು? ಯಾರಿವನು?

ಸದಾ—ಯಾರಾದರೇನು? ನಾನು- ಬ್ರಾಹ್ಮಣ.

ಪುರೋ—ಬ್ರಾಹ್ಮಣ! ಶಿಕ್ಷೆಗೆ ಗುರಿಯಾಗುತ್ತೀಯೆ.

ಸದಾ—ರಾಜನು ಇನ್ನೇನು ಶಿಕ್ಷೆ ಮಾಡಬಲ್ಲ? ತಲೆ

ಯನ್ನು ಒಪ್ಪಿಸುವುದಕ್ಕೇ ಬಂದು ಕುಳಿತಿದ್ದೇನೆ. ಇದನ್ನು ಮೀರಿದ ಶಿಕ್ಷೆ ಯಾವುದು?

ಅಂಬ—ಬ್ರಾಹ್ಮಣ! ಸ್ವಲ್ಪ ಸ್ಥಿರನಾಗು. ನಿನಗೆ ಇದನ್ನು ತಿನ್ನುವ ಇಷ್ಟವಿದ್ದರೆ, ಬೇಕಾದಷ್ಟು ಭಕ್ಷ್ಯ ಭೋಜ್ಯಗಳನ್ನು ಕೊಡಿಸುತ್ತೇನೆ. ಕರ್ಮವು ನಷ್ಟವಾಗುವಂತೆ ಮಾಡಬೇಡ.

ಸದಾ—ಎಷ್ಟು ಕೊಡುತ್ತೀಯೋ ಕೊಡು. ಈಗಲೇ ತಿಂದುಬಿಡುತ್ತೇನೆ. ನಾನು ಬ್ರಾಹ್ಮಣ. ಯಜ್ಞಸೂತ್ರವನ್ನೂ ಹಾಕಿಕೊಂಡಿದ್ದೇನೆ. ಹೊಟ್ಟೆಯ ಹಸಿಯ ಬೇಗೆಯಲ್ಲಿ ಸಂಧ್ಯಾವಂದನೆ ಆಹ್ನಿಕವನ್ನು ಮಾಡಲಾರೆ. ನಮ್ಮಪ್ಪ ತಾತಂದಿರ ಮರ್ಯಾದೆಯನ್ನೂ ಮರೆತಿಲ್ಲ. ಈ ಹುಡುಗನನ್ನಾಗಲಿ, ಈ ಋಷಿಯನ್ನಾಗಲಿ ಉಳಿಸಬೇಕೆಂಬುದರಲ್ಲಿಯೂ ಅಷ್ಟು ಕಾತರನಾಗಿಲ್ಲ. ಲೋಕಹಿತಕ್ಕಾಗಿ ಇಂದ್ರನಿಂದ ವೃತ್ರಾಸುರನನ್ನು ಕೊಲ್ಲಲು ವಜ್ರಾಯುಧವನ್ನು ಮಾಡುವುದಕ್ಕಾಗಿ ಬ್ರಾಹ್ಮಣನೇ ಮೂಳೆಯನ್ನು ಕೊಟ್ಟನೆಂಬುದನ್ನು ನಾನು ಮರೆತಿಲ್ಲ. ನಾನೂ ಅದೇ ಬ್ರಾಹ್ಮಣ. ಅದೇ ಬ್ರಾಹ್ಮಣರ ಯಜ್ಞಸೂತ್ರವನ್ನೂ ಧರಿಸಿದ್ದೇನೆ. ನಾನೂ ಈ ಬಾಲಕ, ರಾಜರ್ಷಿ, ಇವರುಗಳಿಗಾಗಿ ನನ್ನ ತಲೆಯನ್ನು ಕೊಟ್ಟು ಬಿಡುತ್ತೇನೆ. ಆದರೆ ಒಂದೇ ಒಂದು ಆಕ್ಷೇಪಣೆ. ನಾನು ನಿಮ್ಮ ಪುರೋಹಿತನಾಗಲಾರದೆ ಹೋದೆನಲ್ಲಾ ಎನ್ನುವುದು ಒಂದೇ. ಅದು ಸಾಧ್ಯವಾಗಿ

ದ್ದರೆ. ಕಳುವಾಗಿ ಹೋದ ಪಶುವಿಗೆ ಬದಲಾಗಿ ಈ ನರಪಶುಸ್ವರೂಪನಾದ ತಮ್ಮ ಪುರೋಹಿತಪಶುವನ್ನು ಬಲಿಕೊಡುವಂತೆ ಮೊದಲು ವಿಧಾಯಕ ಮಾಡುತ್ತಿದ್ದೆ.

ಅಂಬ—ಇವನೇನು ವಾಚಾಳನಲ್ಲವೆ ?

ಸದಾ—ಇಲ್ಲ. ಇಲ್ಲ. ತರಿಸು. ಬೇಗ ತರಿಸು ಭೋಜ್ಯವಸ್ತುಗಳನ್ನು. ನಾಲಿಗೆಯ ಶಾಪದಿಂದ ಮುಕ್ತಿಯನ್ನು ಪಡೆದು ನೀನು ಮಾಡುವ ಯಜ್ಞಕ್ಕೆ ತಲೆಯನ್ನು ಒಪ್ಪಿಸುತ್ತೇನೆ. ಎಲ್ಲಿ? ತರಿಸು. ಬೇಗ ತರಿಸು. ಅದುವರೆಗೂ ಇಲ್ಲಿರುವ ಅಕ್ಕಿಯನ್ನಾದರೂ ತಿನ್ನುತ್ತಿರುತ್ತೇನೆ. (ಇಟ್ಟಿರುವ ನೈವೇದ್ಯಾದಿಗಳನ್ನು ತಿನ್ನುತ್ತಾನೆ.)

ವಿಶ್ವಾ—ಮಹಾರಾಜ ! ಈ ವಾಚಾಳನಾದ ಬ್ರಾಹ್ಮಣನನ್ನು ಸ್ವಲ್ಪ ತಡೆಯಿರಿ. ನನ್ನ ತಲೆಗೆ ಈ ಮನ್ತ್ರಪೂತವಾದ ಕತ್ತಿಯಿಂದ ಒಂದೇ ಪೆಟ್ಟನ್ನು ಕೊಡು. (ಸದಾನಂದನನ್ನು ಕುರಿತು) ಮಿತ್ರನೆ ! ಯಾರಿಗಾಗಿ ನಿನ್ನ ಪವಿತ್ರವಾದ ಬ್ರಾಹ್ಮಣ ಜೀವನವನ್ನು ಕೊಡಲು ಹೊರಟಿರುವೆ. ನಾನು ವ್ಯಭಿಚಾರಿ. ಕಾಮುಕಲೆಯ ಮೋಹದಿಂದ ತಪಸ್ಸನ್ನು ಬಿಟ್ಟವನು. ಕ್ರೋಧಕ್ಕೆ ತುತ್ತಾಗಿ ನಿರಪರಾಧಿನಿಯಾದ ರಂಭೆಯನ್ನು ಶಿಲೆಯಾಗೆಂದು ಶಾಪವನ್ನು ಕೊಟ್ಟೆ. ನಾನು ಕ್ಷತ್ರಿಯಾಧಮ. ನನಗೋಸ್ಕರ ಈ ದೇವಶರೀರವನ್ನು

ತ್ಯಜಿಸಬೇಡ.--(ಯೂಪಸ್ತಂಭದ ಮೇಲೆ ತಲೆಯಿಡುವನು)

ಸದಾ—ಮಹಾರಾಜ! ಮಹಾರಾಜ! ಇವನು ಬಲಿಯಾಗುವುದಕ್ಕೆ ಅರ್ಹನಲ್ಲ. ಮೈಯಲ್ಲಿ ಗಾಯವಿದೆ. ಮನಸ್ಸಿನಲ್ಲಿ ಕ್ಲೇಶವಿದೆ. ಅಯ್ಯೋ ಮೂಢ ಪುರೋಹಿತಪಶು! ಇಲ್ಲಿ ಬಾ. ನನ್ನ ಮೇಲೆ ನಿನಗೆ ಕೋಪಬಂದಿಲ್ಲವೆ? ನನ್ನನ್ನು ಬಲಿಕೊಡು ಎಂದು ಹೇಳುವುದಿಲ್ಲವೆ? ಮಹಾರಾಜ! ವಿಶ್ವಾಮಿತ್ರ! ನಿಮ್ಮ ಬುದ್ಧಿಯೆಲ್ಲಾ ಎಲ್ಲಿ ಹೋಯಿತು? ಸಾಯುವುದಕ್ಕೆ ಹೋಗುತ್ತಿಯಲ್ಲಾ! ಏಳು, ಏಳು.

ವಿಶ್ವಾ—ಸದಾನಂದ! ತಾಳು. ನನ್ನನ್ನು ಉಳಿಸುವುದಕ್ಕೆ ಪ್ರಯತ್ನ ಪಟ್ಟು ನಾನು ಪ್ರಾಯಶ್ಚಿತ್ತಮಾಡಿಕೊಳ್ಳುವುದಕ್ಕೆ ಅಡ್ಡಿಯಾದೆ. ಕಳಂಕದಿಂದ ಕಲುಷಿತವಾದಾ ನನ್ನ ಜೀವನವನ್ನು ಉಳಿಸಲೆತ್ನಿಸಿ ನೀನೂ ಕಳಂಕಿತನಾಗುವೆ. ನಾನು ಮಾಡಿರುವ ಪಾಪಕ್ಕೆ ಭಯಂಕರವಾದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತೇನೆ. ನೀನು ಅಡ್ಡಿಯಾಗಬೇಡ.

ಸದಾ—ಹಾಗಾದರೆ ಬಾ. ಇನ್ನೂ ಭೋಜ್ಯವಸ್ತುಗಳನ್ನು ತಿಂದಿಲ್ಲ. ಇಬ್ಬರೂ ಒಟ್ಟಿಗೆ ಸಾಯೋಣ. ಮಹಾರಾಜ! ಒಂದು ಜೊತೆ ಪಶುಗಳನ್ನು ಬಲಿಕೊಡು.

ವಿಶ್ವಾ—(ಸದಾನಂದನನ್ನು ತಡೆದು) ರಾಜ! ಈ ವಾ

ಚಾಳನಾದ ಬ್ರಾಹ್ಮಣನನ್ನು ಇನ್ನೊಂದೆಡೆಗೆ ಕಳುಹಿಸುವಂತೆ ಅಪ್ಪಣೆ ಮಾಡು.

ಸದಾ—ರಾಜ ! ಮಹಾರಾಜ ! ನನ್ನಲ್ಲಿ ಮಮತೆಯಿರುವುದಾರಿಗೆ? ನೀನು ಸಮಸ್ತರಾಜ್ಯ ಧನಗಳನ್ನು ಪರಿತ್ಯಾಗಮಾಡಿ ಬ್ರಹ್ಮರ್ಷಿತ್ವವನ್ನು ಪಡೆಯುವ ಆಸೆಯಿಂದ ತಪಸ್ಸಿಗಾರಂಭಿಸಿರುವೆ. ಈಗಲೂ ನಿನ್ನ ಇಷ್ಟಾರ್ಥವು ಕೈ ಗೂಡಿಲ್ಲ. ಅದು ಕೈ ಗೂಡದಿದ್ದರೆ ನಿನ್ನ ಪ್ರತಿಜ್ಞೆಯು ಭಂಗವಾಗುವುದು. ಕರ್ಮಭ್ರಷ್ಟನಾದ ನನ್ನ ಪ್ರಾಣವನ್ನು ಕೊಡುವುದರಿಂದ ಯಾರಿಗೂ ನಾಶವೃದ್ಧಿಗಳಿಲ್ಲ. ಮಹಾರಾಜಾ ಅಂಬರೀಷ! ಋಷಿ ಹತ್ಯವನ್ನು ಮಾಡಬೇಡ. ನನ್ನನ್ನು ಬಲಿಕೊಡು. ನಾನು ಬ್ರಾಹ್ಮಣ. ನಿನ್ನ ಯಜ್ಞವು ಪೂರ್ಣವಾಗಲೆಂದು ಆಶೀರ್ವದಿಸುತ್ತೇನೆ.

ಪುರೋಹಿತ—(ದೂತರನ್ನು ಕುರಿತು) ನೀವು ನಿಂತು ಅದೇನನ್ನು ನೋಡುತ್ತಿರುವಿರಿ? ಈ ಹುಚ್ಚನನ್ನು ಎಳೆದುಕೊಂಡು ಹೋಗಿ ಹೊರಕ್ಕೆ ತಳ್ಳಿ.

(ದೂತರು ಸದಾನಂದನನ್ನು ಎಳೆಯುವರು)

(ಅಂಬರೀಷನನ್ನು ಕುರಿತು) ರಾಜಾ ! ಬಲಿಯನ್ನು ಕೊಡು.

ಸದಾನಂದ—ಬ್ರಹ್ಮಣ್ಯದೇವ ! ನೀನಿಲ್ಲವಲ್ಲ ! ನಾನು ಬ್ರಾಹ್ಮಣನಾಗಿ, ಪ್ರತಿಪಾಲಕ, ರಾಜ, ಋಷಿಗಳ ಪ್ರಾಣವನ್ನು ಉಳಿಸಲಾರದೇ ಹೋದೆ. ಇದೋ

ಈ ಯಜ್ಞ ಸೂತ್ರವನ್ನು ಕಿತ್ತು ಹಾಕಿಬಿಡುತ್ತೇನೆ. ಬರಿಯ ಸೂತ್ರವನ್ನು ಕತ್ತಿನಲ್ಲೇಕೆ ಹಾಕಿಕೊಂಡಿರ ಬೇಕು? (ಯಜ್ಞೋಪವೀತವನ್ನು ಕಿತ್ತು ಹಾಕಲೆತ್ನಿಸುವನು)

(ಬ್ರಹ್ಮಣ್ಯದೇವನು ಬರುವನು)

ಬ್ರಹ್ಮಣ್ಯ—ಬ್ರಹ್ಮಣ್ಯದೇವನಿಲ್ಲವೆಂದು ಹೇಳಿದವರು ಯಾರು? ಇಲ್ಲಿ ನೋಡು. ರಾಜನ ಕತ್ತಿಯು ಒಡೆದು ಹೋಗಿದೆ.

ಅಂಬರೀಷ—(ವಿಶ್ವಾಮಿತ್ರನನ್ನು ಕೊಲ್ಲಲು ಹೋಗಿ ಒಡೆದು ಹೋದ ಖಡ್ಗವನ್ನು ನೋಡಿ) ಇದೇನಾಯಿತು! ಎಂತಹ ವಿಘ್ನ! ನನ್ನ ಕೆಲಸವು ವ್ಯರ್ಥವಾಗಿ ಹೋಯಿತು. ಪಿತೃಲೋಕದವರ ತೃಪ್ತಿಗಾಗಿ ಯಜ್ಞಕ್ಕೆ ಆರಂಭಿಸಿದೆನು. ಪಿತೃಲೋಕದವರ ಶಾಪಕ್ಕೆ ಗುರಿಯಾಗಬೇಕಾಗಿ ಬಂತು. ಕರೆಯಲ್ಪಟ್ಟ ದೇವತೆಗಳು ಹಿಂದಿರುಗುವರು. ವಿಧಿವಿಲಾಸದಿಂದ ನಾನು ನರಕಕ್ಕೆ ಹೋಗಬೇಕಾಯಿತು. ಅಯ್ಯೋ! ಬಹಳ ಕಾಲದಿಂದ ಸಿದ್ಧಪಡಿಸಿಕೊಂಡಿದ್ದದ್ದೆಲ್ಲಾ ವ್ಯರ್ಥವಾಯಿತು. ಎಲ್ಲವೂ ವ್ಯರ್ಥ.

(ಕುರಿಯನ್ನು ಕರೆದುಕೊಂಡು ಸುನೇತ್ರೆಯು ಬರುವಳು.)

ಸುನೇತ್ರೆ—ಇಲ್ಲ. ಮಹಾರಾಜ! ನಿನ್ನ ಕೆಲಸವು ವ್ಯರ್ಥವಾಗಲಿಲ್ಲ. ರಾಜರ್ಷಿಯು ಇಲ್ಲಿಗೆ ಬಂದ

ಕೂಡಲೇ ಎಲ್ಲಾ ಕಾರ್ಯಗಳೂ ಕೈಗೂಡುವುವು. ಇದೊ! ಕಳುವಾಗಿದ್ದ ನಿನ್ನ ಯಜ್ಞಪಶುವನ್ನು ತಂದಿದ್ದೇನೆ. ದೇವೇಂದ್ರನು ನಿನ್ನ ಯಜ್ಞಭಂಗವಾಗಬೇಕೆಂದು ಈ ಪಶುವನ್ನು ಅಪಹರಿಸಿದ್ದನು. ನೀನು ನರಹತ್ಯದ ಪಾಪಕ್ಕೆ ಗುರಿಯಾಗಬೇಕಾದ್ದಿಲ್ಲ. ನಿನ್ನ ಯಜ್ಞವು ಪೂರ್ಣವಾಗುವುದು. ಸ್ವಯಂದೇವೇಂದ್ರ, ಬ್ರಹ್ಮಾದಿಗಳೆಲ್ಲರೂ ನೀನು ಕೊಡುವ ಆಹುತಿಯನ್ನು ಸ್ವೀಕರಿಸಲು ಬಂದಿದ್ದಾರೆ.

ವಿಶ್ವಾ—ಸಾಧ್ವಿ! ನನ್ನ ಇಷ್ಟಾರ್ಥವು ಕೈ ಗೂಡುವುದಾದರೆ, ಅದು ನಿನ್ನ ಅಪಾರವಾದ ಪಾತಿವ್ರತ್ಯದ ಪ್ರಭಾವದಿಂದಲೇ. ಆತ್ಮತ್ಯಾಗಿನಿಯಾದ ಸತಿ! ಸ್ತ್ರೀಯರಲ್ಲಿ ನೀನೇ ಧನ್ಯಳು.

(ಬ್ರಹ್ಮ, ಇಂದ್ರರು ಬರುವರು)

ಬ್ರಹ್ಮ—ವಿಶ್ವಾಮಿತ್ರ! ನೀನೇ ಧನ್ಯ. ನಿನ್ನ ಆತ್ಮತ್ಯಾಗವು ಅಸಾಧಾರಣವಾದದ್ದು. ನಿನಗೆ ಮಹರ್ಷಿತ್ವವನ್ನು ಕೊಟ್ಟಿದ್ದೇನೆ. ಲೋಕ ಸಮಾಜದಲ್ಲಿ ನೀನು ಮಹರ್ಷಿಯೆಂದು ಪ್ರಸಿದ್ಧನಾಗು. ಮಹಾರಾಜ! ಅಂಬರೀಷ! ಇದೇ ನಿನ್ನ ಉತ್ಸರ್ಗಮಾಡಿದ ಯಜ್ಞಪಶು. ನರಹತ್ಯೆಯಿಂದ ಪ್ರಯೋಜನವಿಲ್ಲ. ಆಹುತಿಯನ್ನು ಕೊಡು. ಮಹಾ ತಪಸ್ವಿಯಾದ ವಿಶ್ವಾಮಿತ್ರನು ಬಂದದ್ದರಿಂದ ನಿನ್ನ ಯಜ್ಞವು ಪೂರ್ಣವಾಯಿತು.

ಎಲ್ಲರೂ—ಜಯ ! ಮಹರ್ಷಿ ವಿಶ್ವಾಮಿತ್ರನಿಗೆ ಜಯ ವಾಗಲಿ.

---

## ಐದನೆಯ ಅಂಕ.

---

### ೧. ಹಿಮಾಲಯ ಪರ್ವತ.

(ತಪಸ್ಸಿನಲ್ಲಿರುವ ವಿಶ್ವಾಮಿತ್ರನ ತಪಃ ಪ್ರಭಾವ ದಿಂದ ನಾಲ್ಕು ದಿಕ್ಕುಗಳಲ್ಲಿಯೂ ಅಗ್ನಿಜ್ವಾಲೆ)

(ಬಹ್ಮನು ಬರುವನು)

ಬ್ರಹ್ಮ—ಮಹರ್ಷಿ, ಬ್ರಹ್ಮರ್ಷಿತ್ವ ಒಂದು ಇಲ್ಲ ; ಮತ್ತಾವ ವರವನ್ನು ಬೇಕಾದರೂ ಬೇಡು ; ಕೊಡುತ್ತೇನೆ. ತಪಸ್ಸನ್ನು ನಿಲ್ಲಿಸು.

ವಿಶ್ವಾಮಿತ್ರ—ದೇವ ! ನಾನು ಪುನಃ ತಮ್ಮ ಪಾದಗಳಲ್ಲಿ ಅರಿಕೆ ಮಾಡಿಕೊಂಡಿದೇನೆ, ನನಗೆ ಬೇರೆ ವರ ಬೇಡ ಎಂದು. ತಮ್ಮ ಸ್ಥಳಕ್ಕೆ ತಾವು ಹೊರಡಬಹುದು.

ಬ್ರಹ್ಮ—ನೀನು ಮಹರ್ಷಿತ್ವವನ್ನು ಪಡೆದು ಪ್ರಾಣಿಗಳ ಅಮಂಗಳವನ್ನು ಏಕೆ ಸಾಧಿಸುತ್ತಿ ? ನಿನ್ನ ಘೋರ ತಪಸ್ಸಿನಿಂದ ಜಗತ್ತು ತಪಿಸುತ್ತಿದೆ; ದೇವತೆಗಳು ಕಾತರಪಡುತ್ತಿದ್ದಾರೆ. ನೋಡು, ಈ ಮಂಜುಕವಿದಿ

ರುವ ಹಿಮಾಲಯದ ಶಿಖರದಲ್ಲಿ ಅಗ್ನಿಯು ಪ್ರಜ್ವಲಿಸುತ್ತಿದೆ.

ವಿಶ್ವಾ—ದೇವ, ತಮ್ಮ ಆಜ್ಞೆಯಂತೆ ಇಗೋ ತಪಸ್ಸನ್ನು ಬಿಟ್ಟೆ. ಪ್ರಾಯೋಪವೇಶ ಮಾಡುತ್ತೇನೆ. ಅನಾಹಾರಿಯಾಗಿ ದೇಹತ್ಯಾಗ ಮಾಡುತ್ತೇನೆ.

ಬ್ರಹ್ಮ—ನೀನು ಮಹರ್ಷಿತ್ವವನ್ನು ಪಡೆದಿದ್ದಿ. ಇನ್ನೇಕೆ ಇಷ್ಟು ಕ್ಷೋಭೆ?

ವಿಶ್ವಾ—ದೇವ, ತಮ್ಮ ಪಾದಪದ್ಮಗಳಲ್ಲಿ ವಿಜ್ಞಾಪಿಸಿಕೊಳ್ಳುತ್ತೇನೆ. ಹಟಹಿಡಿದು ಧನ ಜನ ಸಂಸಾರಗಳನ್ನು ಬಿಟ್ಟು ಬ್ರಹ್ಮರ್ಷಿತ್ವವನ್ನು ಪಡೆಯುವುದಕ್ಕಾಗಿ ದೃಢಪ್ರತಿಜ್ಞೆ ಮಾಡಿದೆ. ಈಗ ನನಗೆ ಯಾವ ವರ್ಣಾಶ್ರಮದಲ್ಲಿ ಸ್ಥಾನವಿದೆ, ಹೇಳಿ? ಬ್ರಾಹ್ಮಣನಾಗದೆ ಇದ್ದರೆ ಕ್ಷತ್ರಿಯಾಧಮನಾಗುತ್ತೇನೆ. ಪ್ರತಿಜ್ಞೆಯನ್ನು ಪೂರೈಸುವುದೇ ಕ್ಷತ್ರಿಯನ ಜೀವನೋದ್ದೇಶ. ಯಾವ ಕ್ಷತ್ರಿಯನ ಕೈಲಿ ಪ್ರತಿಜ್ಞೆಯನ್ನು ಪೂರಯಿಸುವದಕ್ಕಾಗುವದಿಲ್ಲವೋ ಅವನು ಜೀವ ಬಿಡುವುದೇ ಉತ್ತಮ. ದೇವ, ತಮ್ಮ ಸ್ಥಾನಕ್ಕೆ ತಾವು ದಯಮಾಡಿ.

(ಬ್ರಹ್ಮನು ಹೊರಟು ಹೋಗುವನು)

ಕಠೋರ ಸಾಧನೆ ಮಾಡಿದೆ. ಯಾತಕ್ಕೆ? ಮೂರು ಲೋಕಗಳಲ್ಲಿಯೂ ನಗೆಗೀಡಾಗಲಿಕ್ಕೆ. ಯಾಕೋ

ನೋಡಿದರೆ ಸ್ವಲ್ಪ ಕಾಲದಲ್ಲಿಯೇ ದೇಹ ಹೋಗು ವಂತೆ ಕಾಣುತ್ತದೆ.

(ಛದ್ಮವೇಷಧಾರಿಯಾದ ಯಮಧರ್ಮನ ಪ್ರವೇಶ)

ನೀನು ಯಾರು ?

ಧರ್ಮ—ನಾನು ಯಮದೂತ.

ವಿಶ್ವಾ—ಇಲ್ಲೇನು ಕೆಲಸ ?

ಧರ್ಮ—ವಿಚಾರಣೆಗೋಸ್ಕರ ನಿಮ್ಮನ್ನು ಯಮಪುರಕ್ಕೆ ಎಳೆದೊಯ್ಯುವುದು.

ವಿಶ್ವಾ—ಹೊರಟು ಹೋಗು, ನಾನು ಯಮರಾಜನ ವಿಚಾರಣೆಗೆ ಒಳಪಟ್ಟವನಲ್ಲ.

ಧರ್ಮ—ಖಂಡಿತ ಒಳಪಟ್ಟವನು. ಪಾಪಮಾಡತಕ್ಕ ಪ್ರತಿಯೊಬ್ಬನೂ ಆತನ ವಿಚಾರಣೆಗೆ ಒಳಪಟ್ಟವನು. ಋಷಿಯಾಗಲಿ ತಪಸ್ವಿಯಾಗಲಿ ಯಾವನು ಪಾಪ ಮಾಡುತ್ತಾನೋ ಅವನನ್ನು ಶಿಕ್ಷಿಸುವುದಕ್ಕೆ ಯಮರಾಜನಿಗೆ ಅಧಿಕಾರವಿದೆ.

ವಿಶ್ವಾ—ನಾನು ಪಾಪಮಾಡಿದ್ದೇನೆಂದು ಹೇಳುವುದಕ್ಕೆ ಕಾರಣವೇನು ?

ಧರ್ಮ—ನೀನು ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಮನಸ್ಸು ಮಾಡಿದೆ. ಇದಕ್ಕಿಂತಲೂ ದೊಡ್ಡ ಪಾಪಾಚರಣೆಯಾವುದು ?

ವಿಶ್ವಾ—ಪ್ರಾಯೋಪವೇಶನವು ಶಾಸ್ತ್ರ ಸಮ್ಮತವಾ

ದ್ದು. ಇದರಿಂದ ನಾನೆಂದಿಗೂ ಪಾಪಾಚಾರಿಯಲ್ಲ.

ಧರ್ಮ—ಇದು ಪ್ರಾಯೋಪವೇಶನವಲ್ಲ. ಯಾವ ಮಹರ್ಷಿಯನು ಈಶ್ವರಲಾಭಕ್ಕಾಗಿ ಆಹಾರವನ್ನು ಬಿಟ್ಟು ಪ್ರಾಣತ್ಯಾಗ ಮಾಡುತ್ತಾನೋ ಅವನು ಮಾಡುವುದು ಪ್ರಾಯೋಪವೇಶನ. ನೀನು ಅಭಿಮಾನದಿಂದ ದೇಹತ್ಯಾಗ ಮಾಡುವುದಕ್ಕೆ ಪ್ರಯತ್ನಿಸಿದೆ. ಮಾನಸಿಕ ಆತ್ಮಹತ್ಯೆಯ ಪಾಪದಿಂದ ನೀನು ಕಲುಷಿತನಾಗಿದ್ದೀಯೆ.

ವಿಶ್ವಾ—ಏನು, ಆಗಲೆ ನನಗೆ ಮೃತ್ಯುಕಾಲ ಸಮೀಪಿಸಿತೆ?

ಧರ್ಮ—ನಿನ್ನ ಆಯುಸ್ಸು ಇನ್ನೂ ಬೇಕಾದಷ್ಟಿದೆ; ಸ್ವೇಚ್ಛೆಯಾಗಿ ದೇಹದ ನಿಯಮಗಳನ್ನು ಮೀರಿ ದೇಹವನ್ನು ಕ್ಷಯಿಸುತ್ತಿದ್ದಿ. ಈ ದಿನ ಉಪವಾಸವಿದ್ದರೆ ನಿನ್ನ ಜೀವವು ಈ ದೇಹವನ್ನು ಬಿಟ್ಟು ಬಿಡುತ್ತದೆ. ದೇಹ ಹೋದರೆ ನಿನ್ನ ಜೀವಕ್ಕೆ ಪುನಃ ಸಿಗುವುದಿಲ್ಲ. ನೀನು ಎಂದು ಮರಣ ಸಂಕಲ್ಪ ಮಾಡಿದೆಯೋ ಅಂದಿನಿಂದ ನಾನು ನಿನ್ನ ಜತೆಯಲ್ಲಿಯೇ ಇದೇನೆ; ದೂರದಲ್ಲಿದ್ದೆ, ಈಗ ಹತ್ತಿರಕ್ಕೆ ಬಂದಿದ್ದೇನೆ. ನಿನ್ನ ಯೋಗ ದೃಷ್ಟಿಯನ್ನು ತೆಗೆ. ನೋಡು ಎದುರಿಗೆ ಎಂಥ ಕಗ್ಗತ್ತಲೆ ಇದೆ. ಈ ತಮೋಮಯ ಸ್ಥಾನದಲ್ಲಿಯೇ ಆತ್ಮಹತ್ಯ ಮಾಡಿದವರು ವಾಸಮಾಡುವುದು. ಇವರೆಲ್ಲರೂ ಅಭಿಮಾನದಿಂದ ಆತ್ಮಹತ್ಯ

ಮಾಡಿಕೊಂಡವರು. ಇವರ ಗುಂಪು ಹೆಚ್ಚುತ್ತಿದೆ, ಆದ್ದರಿಂದಲೇ ನೋಡು, ಎಲ್ಲರೂ ಆನಂದ ಪಡುತ್ತಾರೆ.

ವಿಶ್ವಾ—ನೀನು ಹೇಳುವುದು ನಿಜ. ದೇಹನಾಶದಿಂದ ಫಲವಿಲ್ಲ. ಮಂಜು ಮುಸುಕಿರುವ ಈ ಪ್ರದೇಶದಲ್ಲಿ ಆಹಾರ ಪದಾರ್ಥವು ಯಾವುದೂ ಇಲ್ಲ. ಎಲ್ಲಿಯಾದರೂ ಸ್ವಲ್ಪ ಸಿಗುತ್ತದೇನೋ ನೋಡುತ್ತೇನೆ. ದೇಹನಿಯಮವನ್ನು ಪಾಲನಮಾಡಿ ಮತ್ತೆ ಘೋರವಾದ ತಪಸ್ಸಿಗೆ ಆರಂಭಮಾಡುತ್ತೇನೆ.

(ಬ್ರಹ್ಮನು ಪುನಃ ಪ್ರವೇಶಿಸುವನು)

(ವಿಶ್ವಾಮಿತ್ರನು ಹೊರಟು ಹೋಗುವನು)

ಧರ್ಮ—ಬ್ರಹ್ಮದೇವ, ಬ್ರಹ್ಮರ್ಷಿತ್ವವನ್ನು ದಯಪಾಲಿಸೋಣವಾಗಲಿ, ಇಲ್ಲದೆ ಇದ್ದರೆ ಈ ಮಹರ್ಷಿಯು ತಿರುಗಿ ಘೋರವಾದ ತಪಸ್ಸಿಗೆ ಮೊದಲು ಮಾಡುತ್ತಾನೆ.

ಬ್ರಹ್ಮ—ಇನ್ನೂ ಅಡ್ಡಿ ಇದೆ. ಅದು ಹೋದ ಹೊರತು ಹೇಗೆ ತಾನೇ ಬ್ರಾಹ್ಮಣತ್ವವನ್ನು ಕೊಡುವುದು ?

ಧರ್ಮ—ಇನ್ನೂ ಅಡ್ಡಿಯೆ ? ದೇವ, ತಮ್ಮ ನಿಯಮದಲ್ಲಿ ನರಕದರ್ಶನದಿಂದಲೂ ಪ್ರತಿಬಂಧಕವು ದೂರವಾಗುವುದಿಲ್ಲವೆ ?

ಬ್ರಹ್ಮ—ಧರ್ಮರಾಜ, ನಿನಗೆಲ್ಲವೂ ಗೊತ್ತೆ ಇದೆ. ಪಾ

ಪದ ಫಲವು ತಪಸ್ಸಿನಿಂದ ಹಗುರವಾಗುವುದೇನೋ ನಿಜ; ಆದರೆ ಪೂರ್ತಿಯಾಗಿ ನಿರ್ಮೂಲವಾಗುವು ದಿಲ್ಲ. ತಪಸ್ಸಿನ ಪ್ರಭಾವದಿಂದ ವಜ್ರಾಘಾತವಾಗ ತಕ್ಕ ಸ್ಥಳದಲ್ಲಿ ಅದೇನೋ ತಪ್ಪುತ್ತದೆ, ಸೂಜಿಯ ಗಾಯ ಮಾತ್ರ ಆಗಿಯೇ ಆಗುತ್ತದೆ. ಆದರೆ ನೀನು ಕೃಪೆಮಾಡಿದರೆ, ಆಗ ಆ ಅಡ್ಡಿಯು ಹೋದ ಹಾ ಗೆಯೇ.

## ೨. ಹಿಮಾಲಯದ ಶಿಖರದಮೇಲೆ ಸರೋವರ.

(ವಿಶ್ವಾಮಿತ್ರನ ಪ್ರವೇಶ)

ವಿಶ್ವಾ—ಈ ಮಂಜು ಮುಸುಕಿರುವ ಪ್ರದೇಶದಲ್ಲೇ ನೋ ಯಾವ ಆಹಾರ ಪದಾರ್ಥವೂ (ಅಕಸ್ಮಾತ್ತಾಗಿ ಎದುರಿಗಿದ್ದ ಸರೋವರದ ಕಡೆ ನೋಡಿ) ಇದೇನು? ಇಲ್ಲಿ ಇಂಥ ಸುಂದರವಾದ ಸರೋವರವಿದೆ ಎಂದು ನಾನು ತಿಳಿದಿರಲಿಲ್ಲ. ಆಶ್ಚರ್ಯಕರವಾದ ಸರೋ ವರ, ಅದರ ಮೇಲೆ ಮಂಜು ಮುಸಿಕಿಯೇ ಇಲ್ಲ. ಒಂದು ಕಮಲ ಅರಳಿದೆಯಲ್ಲವೆ? ಯಾರೋ ಒಬ್ಬ ಋುಷಿಯ ತಪಃಪ್ರಭಾವವಿರಬಹುದೆಂದು ತೋರು ತ್ತದೆ, ಇಲ್ಲದೆ ಹೋದರೆ ಈ ಪ್ರದೇಶದಲ್ಲಿ ಹೀಗೆ ಕಮಲವಿರುವುದು ಅಸಂಭವ, ಈ ಮೃಣಾಳವನ್ನು ಕಿತ್ತುತಿಂದು ಜೀವಿಸುತ್ತೇನೆ. (ಕೊಳದಿಂದ ಕಮ ಲದ ಬಳ್ಳಿಯನ್ನು ಕಿತ್ತು ತಂದು) ದೈಹಿಕನಿಯಮ ಗಳನ್ನು ಮೀರಿ ಯಮನ ಶಿಕ್ಷೆಯನ್ನು ತಡೆಯಬಲ್ಲೆ.

ಆದರೆ ನಿಯಮುವನ್ನು ಮೀರುವುದರಿಂದ ಪ್ರಯೋಜನವಿಲ್ಲ. ನನ್ನ ಆದರ್ಶದಿಂದ ಬಹು ಅನಿಷ್ಟವಾಗುವ ಸಂಭವವಿದೆ, ಆತ್ಮಹತ್ಯ ಮಾಡಿಕೊಳ್ಳಲು ಜನರು ಭಯಪಡುವುದಿಲ್ಲ, ಇಷ್ಟ ದೇವನಿಗೆ ನೈವೇದ್ಯಮಾಡಿ ಈ ಮೃಣಾಳವನ್ನು ತಿನ್ನುತ್ತೇನೆ.

(ಇಷ್ಟದೇವತೆಗೆ ನೈವೇದ್ಯಮಾಡಿ ಮೃಣಾಳವನ್ನು ತಿನ್ನುವ ಪ್ರಯತ್ನ-ಆಸಮುಯಕ್ಕೆ ಸರಿಯಾಗಿ ವೃದ್ಧ ಬ್ರಾಹ್ಮಣವೇಷದಿಂದ ಇಂದ್ರನು ಬರುವನು.)

ಇಂದ್ರ—ಇದೇನಿದು, ಮೃಣಾಳ? ನನಗೆ ಮರಣ ಸಮೀಪಿಸಿದೆ. ಈಗ ಏನನ್ನಾದರೂ ತಿನ್ನದಿದ್ದರೆ ಸತ್ತು ಹೋಗುವದು ನಿಶ್ಚಯು.

ವಿಶ್ವಾ—ತಾವು ಯಾರು?

ಇಂದ್ರ—ನಾನೊಬ್ಬ ಹೊಟ್ಟೆಗಿಲ್ಲದ ಬ್ರಾಹ್ಮಣ, ಬೇಗ ಜೀವ ಹೋದರೆ ಈ ಸಂಕಟ ತಪ್ಪುತ್ತೆ.

ವಿಶ್ವಾ—ಸೈರಿಸಿ, ಈ ಮೃಣಾಳವನ್ನು ತಿಂದು ಜೀವವನ್ನು ಉಳಿಸಿಕೊಳ್ಳಿ.

ಇಂದ್ರ—ಹಾಗಾದರೆ ನಿನಗೋಪ್ಪಾ? ನಿನಗೆ ದಿನವೂ ಆಹಾರ ವಸ್ತು ಸಿಕ್ಕುತ್ತೆ ಎಂದು ಕಾಣುತ್ತೆ.

ವಿಶ್ವಾ—ಇಲ್ಲ, ನಾನೂ ಉಪವಾಸವಿರತಕ್ಕವನೇ

ಇಂದ್ರ—ಉಪವಾಸಿಯಾಗಿದ್ದರೆ ನೀನು ಸಾಯುವುದಿಲ್ಲವೆ?

ವಿಶ್ವಾ—ಈವತ್ತು ಹಗಲು ರಾತ್ರಿ ಕೂಡ ಉಪವಾಸ ವಿದ್ದರೆ ಮರಣವಾಗುತ್ತೆ.

ಇಂದ್ರ—ನೀನು ಎಲ್ಲಿಂದ ಮೃಣಾಳ ತಂದೆ? ಅಲ್ಲಿ ಇನ್ನಿಷ್ಟು ಮೃಣಾಳವಿರಬೇಕು. ತೆಗೆದುಕೊಂಡು ಬರುತ್ತೀಯಾ?

ವಿಶ್ವಾ—ಮಂಜು ಮುಸುಕಿದ ಭೂಮಿ, ಹುಲ್ಲು ಸಹಿತ ಹುಟ್ಟುವುದಿಲ್ಲ, ಇಲ್ಲಿಂದ ಸುತ್ತೂ ನೂರು ಹರದಾರಿಯತನಕ ಯಾವ ಆಹಾರಪದಾರ್ಥವೂ ಸಿಕ್ಕುವುದಿಲ್ಲ. ಎದಿರಿಗಿರುವ ಸರೋವರದಲ್ಲಿ ಇದು ಒಂದೇ ಒಂದು ಮೃಣಾಳವಿತ್ತು.

ಇಂದ್ರ—ಆ! ಹಾಗೆಯೆ, ಹಾಗಾದರೆ ಹೇಗೆ! ನೀನು ಸಾಯುತ್ತಿ ಅಂತ ತಿಳಿದೂ ತಿಳಿದೂ ನಾನು ಹೇಗೆ ಈ ಮೃಣಾಳವನ್ನು ತೆಗೆದು ಕೊಳ್ಳಲಿ?

ವಿಶ್ವಾ—ನೀವು ಹಿಂದೆಗೆಯಬೇಡಿ, ದಯವಿಟ್ಟು ಸ್ವೀಕರಿಸಿ. ನಾನು ಸ್ವೇಚ್ಛೆಯಿಂದ ಉಪವಾಸ ಮಾಡಿದವನು, ನಿಮ್ಮಂತೆ ದುರದೃಷ್ಟದಿಂದಲ್ಲ.

ಇಂದ್ರ—ಏನು, ನೀನು ಇಚ್ಛಾಮತವಾಗಿ ಉಪವಾಸ ಮಾಡಿದವನೆ! ಅದೇಕೆ? ನೀನೇ ಅದನ್ನು ತಿಂದು ಪ್ರಾಣವನ್ನು ಉಳಿಸಿಕೊ. ನಾನು ಸತ್ತರೆ ನನಗೇನೂ ಪಾಪ ಬರುವುದಿಲ್ಲ; ನೀನು ಆತ್ಮಹತ್ಯಾ ಪಾಪವನ್ನು ಕಟ್ಟಿಕೊಳ್ಳುತ್ತೀ. ಯಮಪಟ್ಟಣದಲ್ಲಿ ಶಿಕ್ಷೆಗೆ ಗುರಿಯಾಗುತ್ತೀ.

ವಿಶ್ವಾ—ಬ್ರಾಹ್ಮಣ, ನೀನು ಆಹಾರಕ್ಕಾಗಿ ಎಷ್ಟು ಕಾತರನಾಗಿದ್ದಿ ? ನಿನ್ನ ಸಂಕಟವನ್ನು ನಿವಾರಿಸುವುದಕ್ಕಾಗಿ ನಾನು ಕೋಟಿ ನರಕ ಯಾತನೆಗಳನ್ನು ಭಯವಿಲ್ಲದೆ ಅನುಭವಿಸುತ್ತೇನೆ. ನೀನು ಸಂತೋಷದಿಂದ ನನ್ನ ದಾನವನ್ನು ಪರಿಗ್ರಹಿಸು.

(ಮೃಣಾಳವನ್ನು ಕೊಡುವನು)

ಇಂದ್ರ—ನೀನೇ ಧನ್ಯ-ಏನು ನಿನ್ನ ದಯಾಗುಣ! ನೀನು ಬ್ರಾಹ್ಮಣನ ಜೀವರಕ್ಷಣಾರ್ಥವಾಗಿ ಆತ್ಮಹತ್ಯಾ ಪಾಪದಿಂದ ಬರುವ ನರಕವಾಸಕ್ಕೂ ಸಿದ್ಧನಾಗಿದ್ದಿ. ನಿನ್ನ ಈ ಮೃಣಾಳದಾನವು ಮೂರು ಲೋಕಗಳ ದಾನಕ್ಕಿಂತಲೂ ಹೆಚ್ಚಿನದು.

(ಮೃಣಾಳವನ್ನು ತೆಗೆದುಕೊಂಡು ಇಂದ್ರನು ಹೋಗುವನು.)

ವಿಶ್ವಾ—ಮರಣವು ಸಮೀಪಿಸಿದ ಹಾಗೆ ತೋರುತ್ತದೆ. ಇಂದ್ರಿಯಗಳು ಬಲಹೀನವಾಗುತ್ತಿವೆ. ಆದರೆ ಈಗ ಹೊಂದಿರುವ ಆತ್ಮಪ್ರಸಾದದ ಮುಂದೆ ಬ್ರಹ್ಮರ್ಷಿತ್ವ ಲಾಭವೂ ತುಚ್ಛ. ನರಕಯಾತನೆಯನ್ನೂ ನಾನು ಲಕ್ಷ್ಯಮಾಡುವುದಿಲ್ಲ. ಅವಸಾನಕಾಲ ಸಮೀಪಿಸಿತು. ನಾರಾಯಣನನ್ನು ಸ್ಮರಿಸುತ್ತೇನೆ-ನಾರಾಯಣ, ನಾರಾಯಣ.

(ಬ್ರಹ್ಮನ ಪ್ರವೇಶ)

ಬ್ರಹ್ಮ—ವಿಶ್ವಾಮಿತ್ರ, ನಾನು ಪುನಃ ನಿನ್ನ ಬಳಿಗೆ ಬಂ

ದಿದ್ದೇನೆ. ಬ್ರಹ್ಮರ್ಷಿತ್ವವೊಂದು ಹೊರತು ಬೇಕಾದ ಬೇರೆ ವರವನ್ನು ಬೇಡಿಕೊ. ನನ್ನ ಆಗಮನವನ್ನು ವ್ಯರ್ಥಮಾಡಬೇಡ. ನಾನು ನಿನ್ನನ್ನು ಮೃತ್ಯು ಮುಖದಿಂದ ರಕ್ಷಿಸುತ್ತೇನೆ.

ವಿಶ್ವಾ—ದೇವ, ನನ್ನ ಉದ್ದೇಶ ವಿಫಲವಾಯಿತು; ಮೃತ್ಯು ಮುಖದಿಂದ ತಪ್ಪಿಸಿಕೊಳ್ಳಬೇಕೆಂದು ನನಗೆ ಇಚ್ಛೆ ಇಲ್ಲ. ವರವನ್ನು ಕೊಡುವುದೇ ಆದರೆ ಒಂದು ಪ್ರಾರ್ಥನೆ, ನಾನು ತಪಸ್ಸಿನಿಂದ ಗಳಿಸಿದ ಯೋಗೈಶ್ವರ್ಯವನ್ನು ತೆಗೆದುಕೊಂಡು ನನ್ನನ್ನು ಐಶ್ವರ್ಯ ಹೀನನನ್ನಾಗಿ ಮಾಡಿ.

ಬ್ರಹ್ಮ—ಯೋಗೈಶ್ವರ್ಯವನ್ನು ಬಿಟ್ಟದ್ದರಿಂದ ನಿನಗಾಗುವ ಲಾಭವೇನು?

ವಿಶ್ವಾ—ದೇಹಾವಸಾನ ಸಮಯದಲ್ಲಿ ಅಭಿಮಾನ ಶೂನ್ಯನಾಗಬೇಕೆಂಬುದೇ ನನ್ನ ಪ್ರಾರ್ಥನೆ. ನಿರಾಶನಾಗಿ ಪ್ರಾಣತ್ಯಾಗಮಾಡಬೇಕೆಂದು ನನಗೆ ಇಷ್ಟ. ನಾನು ಅಭಿಮಾನಶೂನ್ಯನಾಗಬೇಕು, ಇದೊಂದೇ ನನಗಿರುವ ಆಸೆ.

ಬ್ರಹ್ಮ—ವಿಶ್ವಾಮಿತ್ರ, ಇಂದಿನಿಂದ ನಿನಗೆ ಬ್ರಹ್ಮರ್ಷಿತ್ವವನ್ನು ಕೊಟ್ಟಿದ್ದೇನೆ. ಇಂದಿನಿಂದ ನೀನು ಬ್ರಾಹ್ಮಣ.

ವಿಶ್ವಾ—ಲೋಕಪಿತಾಮಹ, ನಾನು ಧನ್ಯನಾದೆ. ಆದರೆ ನಾನು ಬ್ರಾಹ್ಮಣತ್ವವನ್ನು ಹೊಂದಿದ್ದನ್ನು

ತಾವು ಜನಸಮಾಜದಲ್ಲಿ ಪ್ರಕಾಶಪಡಿಸಬೇಕು. ಇಲ್ಲದಿದ್ದರೆ ಜನಸಮಾಜವು ನನ್ನನ್ನು ಬ್ರಾಹ್ಮಣನೆಂದು ಒಪ್ಪಿಕೊಳ್ಳುವುದು ಹೇಗೆ?

ಬ್ರಹ್ಮ—ವತ್ಸ, ವಸಿಷ್ಠರ ಹತ್ತಿರಕ್ಕೆ ಹೋಗು. ಅವರಿಗೆ ಹೇಳು ನಾನು ನಿನಗೆ ಬ್ರಹ್ಮರ್ಷಿತ್ವವನ್ನು ಕೊಟ್ಟಿದ್ದೇನೆಂದು, ಅವರು ನಿನ್ನ ಬ್ರಾಹ್ಮಣತ್ವವನ್ನು ಒಪ್ಪಿಕೊಂಡರೇನೆ ನಿನ್ನನ್ನು ಸಮಾಜದವರು ಬ್ರಾಹ್ಮಣನೆಂದು ಪರಿಗಣಿಸುವುದು.

ವಿಶ್ವಾ—ವಸಿಷ್ಠನು ನನ್ನ ಮಾತನ್ನು ನಂಬುತ್ತಾನೆಯೆ?

ಬ್ರಹ್ಮ—ವಸಿಷ್ಠರಿಗೆ ಗೊತ್ತಿದೆ ನೀನು ಸುಳ್ಳುಹೇಳುವವನಲ್ಲವೆಂದು, ನಾನು ವರ ಕೊಟ್ಟಿದ್ದೇನೆ ಎಂದು ನೀನು ಹೇಳಿದರೆ ಅವರು ಆ ಮಾತಿನಲ್ಲಿ ಅಪನಂಬಿಕೆಯನ್ನು ತೋರಿಸುವುದಿಲ್ಲ. ನೀನು ವಸಿಷ್ಠರ ಹತ್ತಿರಕ್ಕೆ ಹೋಗು.

ವಿಶ್ವಾ—ಪ್ರಭು, ನಾನು ಅನಾಹಾರಿ. ಶಾರೀರಕ ನಿಯಮದಂತೆ ಈ ದಿವಸವೇ ನನ್ನ ದೇಹ ಬಿದ್ದುಹೋಗುತ್ತೆ. ನನ್ನ ಅಭೀಷ್ಟ ಸಿದ್ಧಿಯಾಯಿತು. ನನಗೆ ಇನ್ನು ದೇಹದಿಂದ ಆಗಬೇಕಾದ್ದೇನೂ ಇಲ್ಲ. ನಾನು ಬ್ರಹ್ಮರ್ಷಿತ್ವ ಪಡೆದದ್ದು ಲೋಕದಲ್ಲಿ ಪ್ರಚಾರವಾಗಬೇಕು ಎಂಬುದೊಂದೇ ನನ್ನ ಇಷ್ಟ.

ಬ್ರಹ್ಮ—ಓಹೋ, ನಿನಗೆ ಯಶಸ್ಸನ್ನು ಹೊಂದಬೇಕೆಂಬ ಇಚ್ಛೆಯೋ?

ವಿಶ್ವಾ—ಊಃ, ಇಲ್ಲ.

ಬ್ರಹ್ಮ—ಹಾಗಾದರೆ ಪ್ರಚಾರದ ಪ್ರಯೋಜನ?

ವಿಶ್ವಾ—ಅತಿ ಉಚ್ಚಪ್ರಯೋಜನ. ಜಗತ್ತಿಗೆಲ್ಲಾ ಈ ಉಚ್ಚತತ್ವ ಗೊತ್ತಾಗುತ್ತದೆ, ಬ್ರಾಹ್ಮಣತ್ವ ತಪಸ್ಸಿಗೆ ಅಧೀನವಾದ್ದು ಎಂಬುದು. ವರ್ಣಾಂತರದಲ್ಲಿ ಹುಟ್ಟಿದ ಉಚ್ಚಮನಸ್ಕರಾದ ಜನರು ಬ್ರಾಹ್ಮಣತ್ವವನ್ನು ಸಂಪಾದಿಸಬೇಕೆಂದು ಅಪೇಕ್ಷಿಸಿದರೆ ಅವರು ಖಂಡಿತವಾಗಿಯೂ ತಪಸ್ಸಿನ ಪ್ರಭಾವದಿಂದ ಅದನ್ನು ಪಡೆಯುತ್ತಾರೆ. ಈಗ ಜನಗಳು ತಿಳಿದುಕೊಂಡಿರುವುದು ಬ್ರಾಹ್ಮಣನ ಹೊಟ್ಟೆಯಲ್ಲಿ ಮಾತ್ರ ಬ್ರಾಹ್ಮಣ ಹುಟ್ಟುತ್ತಾನೆಂದು. ಮನುಷ್ಯನು ಉಚ್ಚ ನೀಚ, ಆಗುವುದು ಅವನ ಆಚಾರದಿಂದ ಎಂದು ನನ್ನ ಆದರ್ಶದಿಂದ ಭೂಮಿಯಲ್ಲಿ ಪ್ರಚಾರವಾಗುತ್ತೆ. ಯಾವನು ತಪಸ್ವಿಯಾಗುತ್ತಾನೋ ಅವನದು ಬ್ರಾಹ್ಮಣತ್ವ. ಆಚಾರದಿಂದ ಬ್ರಾಹ್ಮಣನಾದವನು ಎಲ್ಲರಿಗಿಂತಲೂ ಶ್ರೇಷ್ಠನಾಗುತ್ತಾನೆ. ಬ್ರಾಹ್ಮಣನ ಮನೆಯಲ್ಲಿ ಹುಟ್ಟಿದವನಿಗೆ ಬಾಲ್ಯಾರಭ್ಯ ಸದಾಚಾರದಲ್ಲಿ ಅಭ್ಯಾಸವಾಗುತ್ತದೆ. ಇಷ್ಟೇ ಬ್ರಾಹ್ಮಣರ ಮನೆಯಲ್ಲಿ ಹುಟ್ಟುವುದರ ಗೌರವ. ಈ ಸತ್ಯವು ಎಲ್ಲಾ ಕಡೆಗಳಲ್ಲಿಯೂ ಪ್ರಚಾರವಾದರೆ ಜಗತ್ತಿನಲ್ಲಿ ಎಷ್ಟೋ ಉನ್ನತಿಗೆ ಅವಕಾಶವಾಗುತ್ತೆ. ನಾನು ಬ್ರಾಹ್ಮಣತ್ವವನ್ನು ಹೊಂದಿದೆನೆಂಬುದು ಜನಗಳಿಗೆ ಗೊತ್ತಾಗಲಿ ಎಂದು ಅಪೇಕ್ಷಿಸುವುದು ಇಷ್ಟ

ಕ್ಕಾಗಿಯೇ, ಅದರಿಂದ ಲೋಕಕ್ಕೆ ಎಷ್ಟೋ ಹಿತ ವಾಗುತ್ತದೆ.

(ಇಂದ್ರನ ಪ್ರವೇಶ)

ಇಂದ್ರ—ನಾನು ಇಂದ್ರ, ನಿನಗೆ ತಿಳಿಯದಿರಲೆಂದು ಬ್ರಾಹ್ಮಣ ವೇಷವನ್ನು ಧರಿಸಿದೆ. ನೀನು ಬ್ರಹ್ಮ ರ್ಷಿ, ನಿನಗಿನ್ನು ದೇಹಾದಿ ನಿಯಮಗಳೆಲ್ಲಿ? ನೀನು ಎಲ್ಲಾ ನಿಯಮಗಳನ್ನು ಮೀರಿರುವೆ.

ವಿಶ್ವಾ—ದೇವರಾಜ, ಕೆಟ್ಟ ಆದರ್ಶವನ್ನು ಸ್ಥಾಪಿಸಬೇ ಕೆಂದು ನನಗೆ ಮನಸ್ಸಿನಲ್ಲಿಲ್ಲ. ಯಾರು ತ್ರಿಕಾಲಜ್ಞ ರೋ ಅವರು ಇಚ್ಛಾ ಮಾತ್ರದಿಂದ ಸಾಗರವನ್ನು ಹಾರಬಲ್ಲರೆಂದು ಶಾಸ್ತ್ರವಚನವಿದೆ. ಹಾಗಿದ್ದರೂ ಕೂಡ ವಿಧಿನಿಯಮವನ್ನು ಮೀರುವುದು ಅವರಿಗೆ ಉಚಿತವಲ್ಲ. ಬ್ರಹ್ಮನಿಯಮವನ್ನು ಶಿರಸಾವಹಿಸಿ ದ್ದೇನೆ.

ಬ್ರಹ್ಮ—ನನ್ನ ನಿಯಮದಿಂದಲೇ ನಿನ್ನಂಥ ತಪಸ್ವಿಗಳು ಎಲ್ಲಾ ನಿಯಮಗಳಿಗೂ ಅತೀತರು. ಇಂದಿನಿಂದ ನೀನು ಸ್ವೇಚ್ಛೆಯಾಗಿ ಮೂರು ಲೋಕಗಳಲ್ಲಿಯೂ ಸಂಚರಿಸುವುದಕ್ಕೆ ಅಧಿಕಾರಿ. ಯಾವಾಗ ಯಾವ ಲೋಕದಲ್ಲಿ ಸಂಚಾರಮಾಡಬೇಕೆಂದು ಇಚ್ಛೆ ಹು ಟ್ಟುತ್ತದೆಯೋ ಮನೋವೇಗದಿಂದ ಆಗಲೇ ಆ ಲೋ ಕಕ್ಕೆ ಹೋಗಬಲ್ಲೆ. ವತ್ಸ, ಲೋಕದ ಹಿತಸಾಧನೆ ಗಾಗಿಯೇ ನೀನು ದೇಹಧಾರಣ ಮಾಡಬೇಕು. ಕಾ

ಲಾಂತರದಲ್ಲಿ ಸಾಕ್ಷಾತ್ ನಾರಾಯಣನೇ ನಿನ್ನ ಶಿಷ್ಯನಾಗುತ್ತಾನೆ. ನಿನಗೆ ಮಂಗಳವಾಗಲಿ.

ವಿಶ್ವಾ—ಹೇ ಚತುರಾನನ, ನೀನು ಭಯಂಕರವಾದ ಏಕಾರ್ಣವದಲ್ಲಿದ್ದ ನಾಗಶಯನನ ನಾಭಿಕಮಲದಿಂದ ಹುಟ್ಟಿದ ಮಹಾತ್ಮ. ನೀನೇ ಲೋಕ ಸ್ರಷ್ಟಾ, ನೀನು ವೀಣಾಪಾಣಿಯಾದ ವೇದ ವಿದ್ಯೆಗೆ ನಿಯತ ಆಶ್ರಯನು, ನನ್ನ ಅಭೀಷ್ಟವನ್ನು ಪೂರೈಸಿದೆ. ದಾಸನಾದ ನಾನು ತಮ್ಮ ಚರಣಾಂಬುಜಕ್ಕೆ ನಮಿಸುತ್ತೇನೆ.

(ಸಿದ್ಧಚಾರಣರು ಬರುವರು.)

ಶುದ್ಧಚಿತ್ತ ! ಧರಾಪವಿತ್ರ ! ವರನರ ! ತಪಾಚಾರೀ |
ಪೌರುಷಯಶ ! ಪರಮ ಆದರ್ಶ ! ತಾಪಸಹರ್ಷಕಾರೀ !
ವಿಶ್ವಾಮಿತ್ರ ! ಜನಮಿತ್ರ ! ಉದ್ಯಮಪ್ರಚಾರೀ !
ಉಚ್ಚವಿಭವ ಗೌರವಲಾಭ ! ವಿಘ್ನಬಾಧಾಹಾರಿ !
ಬ್ರಹ್ಮಋಷಿ ! ಮನೀಷೀಪುರುಷ ! ಯಾಜೀ ! ಯೋಗಧಾರೀ !
ಜಯ ಜಯ ಜಯ ಆಶ್ರಿತ ಭಯಹಾರೀ !

(ಬ್ರಹ್ಮ ಇಂದ್ರ ಇಬ್ಬರು ಹೊರತು ಮಿಕ್ಕವರು ಹೊರಟು ಹೋಗುವರು)

ಇಂದ್ರ—ದೇವ, ತಾವೇ ಬ್ರಹ್ಮರ್ಷಿತ್ವವನ್ನು ಕೊಟ್ಟ ಮೇಲೆ, ವಸಿಷ್ಠರೇಕೆ ಬೇಕು ?

ಬ್ರಹ್ಮ—ದೇವರಾಜ, ಬ್ರಾಹ್ಮಣ ಸಾಮಾನ್ಯನಲ್ಲ-ಅವನ ಪಾದ ಚಿಹ್ನವನ್ನು ನಾರಾಯಣನು ತಾನೇ ವಕ್ಷ

ದಲ್ಲಿ ಧರಿಸುತ್ತಾನೆ. ಸಂಪೂರ್ಣ ಸಂಸ್ಕಾರವಾದ ಹೊರತು ಬ್ರಾಹ್ಮಣನಾಗುವುದಿಲ್ಲ. ವಸಿಷ್ಠನ ಸಹವಾಸದಿಂದ ಆ ಸಂಸ್ಕಾರ ಪೂರ್ತಿಯಾಗುತ್ತದೆ.

(ಇಬ್ಬರೂ ತೆರಳುವರು)

## ೩. ವಶಿಷ್ಠರ ಆಶ್ರಮ.

(ವಶಿಷ್ಠ ಮತ್ತು ಅರುಂಧತಿ.)

ಅರುಂಧತಿ—ಪ್ರಭು, ಪುನಃ ವಿಶ್ವಾಮಿತ್ರನೊಡನೆ ಕಲಹ, ನನ್ನ ಹೃದಯವು ನಡುಗುತ್ತದೆ. ಮಹಾ ಕೋಪಿಷ್ಠನಾದ ಋಷಿ, ಆತನ ಕ್ರೋಧದಿಂದಲೇ ನನ್ನ ನೂರು ಮಂದಿ ಮಕ್ಕಳೂ ನಾಶವಾದರು. ಶಕ್ತಿಯ ಏಕಮಾತ್ರ ಪುತ್ರನಾದ ಪರಾಶರನ ಮುಖವನ್ನು ನೋಡಿಕೊಂಡು ಮನೆಯಲ್ಲಿದ್ದೇನೆ. ವಂಶಕ್ಕೆ ಇರುವನು ಒಬ್ಬನೇ ಮಗು. ವಿಶ್ವಾಮಿತ್ರನ ಕೋಪದಿಂದ ಇನ್ನು ಅಮಂಗಳವಾಗದಿದ್ದರೆ ಸಾಕು. ಹಾಗೇನಾದರೂ ಆದರೆ ಯಾರಿಗೋಸ್ಕರ ಮನೆಯಲ್ಲಿ ವಾಸ ಮಾಡಬೇಕು? ವಿಶ್ವಾಮಿತ್ರನೊಂದಿಗೆ ಇನ್ನು ಕಲಹ ಮಾಡಿದ್ದರಿಂದ ಪ್ರಯೋಜನವಿಲ್ಲ.

ವಸಿಷ್ಠ—ಸಾಧ್ವಿ, ನಾನು ಕಲಹಪ್ರಿಯನಲ್ಲ; ವಿಶ್ವಾಮಿತ್ರನೊಂದಿಗೆ ನನಗೇನೂ ವ್ಯಾಜ್ಯವಿಲ್ಲ.

ಅರುಂ—ಹಾಗಾದರೆ ಆತನನ್ನು ಯಾಕೆ ಬ್ರಾಹ್ಮಣ ಎಂದು ಒಪ್ಪಿಕೊಳ್ಳಬಾರದು? ವಿಶ್ವಾಮಿತ್ರನು ಎರ

ಡು ಸಲ ಮನೆಯ ಬಾಗಿಲಿಗೆ ಬಂದ. ಆದರೂ ಯಾಕೆ ಅವನನ್ನು ಹಿಂದಕ್ಕೆ ಕಳುಹಿಸಿದಿರಿ ?

ವಶಿಷ್ಠ—ಶಾಸ್ತ್ರಕ್ಕೆ ಅಮರ್ಯಾದೆಯನ್ನು ನಾನು ಮಾಡುವುದು ಹೇಗೆ? ಬ್ರಾಹ್ಮಣನ ಲಕ್ಷಣ ಕಂಡಹೊರತು ಹೇಗೆ ಬ್ರಾಹ್ಮಣ ಎಂದು ಒಪ್ಪುವುದು ?

ಅರುಂ—ಪ್ರಭು, ನನ್ನ ತಪ್ಪನ್ನು ಕ್ಷಮಿಸಬೇಕು. ಬ್ರಹ್ಮನೇ ಆತನಿಗೆ ಬ್ರಹ್ಮರ್ಷಿತ್ವ ಕೊಟ್ಟಮೇಲೆ ನೀವೇಕೆ ಒಪ್ಪಬಾರದು ? ಹಾಗಾದರೇನು ಬ್ರಹ್ಮ ಅವನಿಗೆ ಬ್ರಹ್ಮರ್ಷಿತ್ವವನ್ನು ಕೊಡಲಿಲ್ಲವೆ ?

ವಸಿಷ್ಠ—ವಿಶ್ವಾಮಿತ್ರನು ಸುಳ್ಳು ಹೇಳುವವನಲ್ಲ. ಬ್ರಹ್ಮ ಅವನಿಗೆ ಬ್ರಹ್ಮರ್ಷಿತ್ವವನ್ನು ಕೊಟ್ಟದ್ದು ನಿಜ.

ಅರುಂ—ಹಾಗಾದರೆ ನೀವೇಕೆ ಒಪ್ಪುವುದಿಲ್ಲ ?

ವಸಿಷ್ಠ—ಸಾಧ್ವಿ, ವೇದ ವಿಧಿ ಬ್ರಹ್ಮನ ಬಾಯಿಂದಲೇ ಬಂದದ್ದು. ಆತನು ಬ್ರಹ್ಮರ್ಷಿತ್ವ ಕೊಟ್ಟನೆಂಬುದನ್ನು ನಾನು ನಂಬುತ್ತೇನೆ; ಆದರೂ ನಾನು ಚಿರಕಾಲದಿಂದಲೂ ಪ್ರಚಾರದಲ್ಲಿರುವ ಶಾಸ್ತ್ರವನ್ನು ಎಂದಿಗೂ ಅಗೌರವಿಸಲಾರೆ. ಯಾವಾಗ ಆತನೇ ಹೇಳಿದ, ನಾನು ಬ್ರಾಹ್ಮಣನೆಂದು ಒಪ್ಪಿದರೇನೆ ವಿಶ್ವಾಮಿತ್ರನು ಜಗತ್ತಿನಲ್ಲಿ ಬ್ರಾಹ್ಮಣನೆಂದು ಪ್ರಚಾರವಾಗುತ್ತೆ ಎಂದು, ಆಗನಾನು ಶಾಸ್ತ್ರೀಯವಾದ ಲಕ್ಷಣವು ವಿಶ್ವಾಮಿತ್ರನಲ್ಲಿ ಕಂಡು ಬರದಿದ್ದಾಗ

ಎಂದಿಗೂ ಅವನನ್ನು ಬ್ರಾಹ್ಮಣ ಎಂದು ಸ್ವೀಕಾರ ಮಾಡುವುದಿಲ್ಲ.

ಅರುಂ—ಪ್ರಭು, ವಂಶರಕ್ಷಾರ್ಥವಾಗಿ ಈ ದಾಸಿಯು ನಿರ್ಬಂಧ ಪಡಿಸುವುದು ; ಬ್ರಹ್ಮನು ಯಾರನ್ನು ಬ್ರಾಹ್ಮಣ ಎಂದು ಸ್ವೀಕಾರ ಮಾಡಿದನೋ ಅವನನ್ನು ನೀವೇಕೆ ಬ್ರಾಹ್ಮಣ ಎಂದು ಒಪ್ಪಿಕೊಳ್ಳಬಾರದು

ವಸಿಷ್ಠ—ಸಾಧ್ವಿ ! ವಂಶರಕ್ಷಣೆ ಏನು ತುಚ್ಛವಾದದ್ದೆ! ನಾನು ಎಂಥಾ ಅನಿಷ್ಟದ ಭಯದಿಂದಲೂ ಬ್ರಾಹ್ಮಣನಾಗಿ ಶಾಸ್ತ್ರಕ್ಕೆ ಎಂದಿಗೂ ಅಗೌರವನ್ನು ಉಂಟು ಮಾಡಲಾರೆ. ಎಷ್ಟು ದಿನ ವಿಶ್ವಾಮಿತ್ರನಲ್ಲಿ ಬ್ರಾಹ್ಮಣ ಲಕ್ಷಣವು ಕಂಡು ಬರುವುದಿಲ್ಲವೋ ನಾನೆಂದಿಗೂ ಅವನನ್ನು ಬ್ರಾಹ್ಮಣ ಎಂದು ಒಪ್ಪುವುದಿಲ್ಲ.

ಅರುಂ—ಪ್ರಭು, ಬ್ರಾಹ್ಮಣನ ಲಕ್ಷಣವೇನು ?

ವಶಿಷ್ಠ—ಸಾಧ್ವಿ, ನಿನಗೆ ಅದೆಲ್ಲವೂ ಗೊತ್ತಿದೆ. ಗೋವಿಗಾಗಿ ವಿಶ್ವಾಮಿತ್ರನೊಂದಿಗೆ ವಿವಾದ ಹುಟ್ಟಿದಾಗ ಬ್ರಾಹ್ಮಣ ಲಕ್ಷಣವೇನೆಂಬುದನ್ನು ನೀನೇ ನನಗೆ ಜ್ಞಾಪಿಸಿದೆ. ಶಮ, ದಮ, ತಿತೀಕ್ಷಾ, ಅಹಿಂಸಾ, ಯಜನ, ಯಾಜನ, ಅಧ್ಯಯನ, ದಾನ, ಪ್ರತಿಗ್ರಹ, ಈ ಎಲ್ಲಾ ಲಕ್ಷಣಗಳು ಯಾರಲ್ಲಿ ಪ್ರಕಾಶಿಸುತ್ತವೆಯೋ ಅವನೇ ಬ್ರಾಹ್ಮಣ. ಮನೆಯೊಳಕ್ಕೆ ಹೋಗು, ವಿಶ್ವಾಮಿತ್ರನು ಬರುತ್ತಿದ್ದಾನೆ.

(ಅರುಂಧತಿಯು ಹೊರಡುವಳು)

(ವಿಶ್ವಾಮಿತ್ರನು ಬರುವನು.)

ವಿಶ್ವಾ—ನಮೋ ನಾರಾಯಣ. ಏನು ಈಗಲೂ ನೀನು ನನ್ನನ್ನು ಬ್ರಾಹ್ಮಣ ಎಂದು ಸ್ವೀಕಾರ ಮಾಡುವದಿಲ್ಲವೋ? ನಾನು ಮೂರನೆಸಲ ನಿನ್ನ ಹತ್ತಿರಕ್ಕೆ ಬಂದಿದ್ದೇನೆ. ಈಸಲ ನೀನು ನನ್ನನ್ನು ಬ್ರಾಹ್ಮಣನೆಂದು ಒಪ್ಪಿಕೊಳ್ಳದಿದ್ದರೆ, ನಿನಗೆ ಮಹಾ ಅನಿಷ್ಟ ಉಂಟಾಗುತ್ತದೆ.

ವಸಿಷ್ಠ—ಇಷ್ಟವಾದರೂ ಆಗಲಿ, ಅನಿಷ್ಟವಾದರೂ ಆಗಲಿ, ಅಬ್ರಾಹ್ಮಣನನ್ನು ನಾನು ಹ್ಯಾಗೆ ತಾನೆ ಬ್ರಾಹ್ಮಣ ಎಂದು ಒಪ್ಪಿಕೊಳ್ಳಲಿ?

ವಿಶ್ವಾ—ಇಲ್ಲಿ ಕೇಳು-ನಿನಗೆ ನನ್ನ ಮಾತಿನಲ್ಲಿ ನಂಬಿಕೆಯೇನು? ಬ್ರಹ್ಮನು ನನಗೆ ವರವನ್ನು ಕೊಟ್ಟಿದ್ದಾನೆ, ನಾನು ಬ್ರಹ್ಮರ್ಷಿತ್ವವನ್ನು ಪಡೆದಿದ್ದೇನೆ.

ವಸಿಷ್ಠ—ಬ್ರಹ್ಮನು ವರಕೊಟ್ಟ ಎಂಬುದನ್ನು ನಾನು ಒಪ್ಪದೇ ಇಲ್ಲ; ಆದರೆ ಎಂದಿನವರೆಗೆ ನನಗೆ ನಿನ್ನಲ್ಲಿ ಬ್ರಾಹ್ಮಣ ಲಕ್ಷಣವು ಕಂಡು ಬರುವುದಿಲ್ಲವೋ ಅಂದಿನವರೆಗೆ ನೀನು ಬ್ರಾಹ್ಮಣ ಎಂದು ನಾನು ಒಪ್ಪಿಕೊಳ್ಳುವುದಿಲ್ಲ.

ವಿಶ್ವಾ—ನಾನು ಎಲ್ಲಿಂದ ಬಂದೆ, ಗೊತ್ತೋ?

ವಶಿಷ್ಠ—ಅದನ್ನು ತಿಳಿಯಬೇಕಾದ ಅಗತ್ಯ ನನಗಿಲ್ಲ.

ವಿಶ್ವಾ—ಕೇಳು, ನಾನು ಬ್ರಹ್ಮನ ಅಪ್ಪಣೆಯ ಪ್ರಕಾರ

ನಿನ್ನ ಹತ್ತಿರಕ್ಕೆ ಬಂದು ನಿನಗೆ ನಮಸ್ಕಾರ ಮಾಡಿದೆ, ನೀನು ಪ್ರತಿನಮಸ್ಕಾರ ಮಾಡಲಿಲ್ಲ. ಇದನ್ನು ಬ್ರಹ್ಮನಿಗೆ ತಿಳಿಸಿದೆ, ಬ್ರಹ್ಮನು ಇನ್ನೊಂದು ಸಲ ನಿನ್ನ ಬಳಿಗೆ ಬರಬೇಕೆಂದು ಹೇಳಿದ. ನಾನು ಪುನಃ ಬಂದು ನಿನಗೆ ನಮಸ್ಕಾರ ಮಾಡಿದೆ, ನೀನು ಪ್ರತಿ ನಮಸ್ಕಾರ ಮಾಡಲಿಲ್ಲ. ಆದ್ದರಿಂದಲೇ ನಾನು ಪುನಃ ಬ್ರಹ್ಮಲೋಕಕ್ಕೆ ಹೋದೆ.

ವಸಿಷ್ಠ—ಈ ಸುದ್ದಿಯಿಂದ ನನಗೆ ಆಗಬೇಕಾದ್ದೇನು?

ವಿಶ್ವಾ—ನಾನು ಬ್ರಹ್ಮನ ಹತ್ತಿರ ವರ ಪಡೆದುಕೊಂಡು ಬಂದಿದ್ದೇನೆ.

ವಸಿಷ್ಠ—ಒಳ್ಳೆಯದಾಯಿತು, ನಾನು ಅದನ್ನು ಕೇಳಲಿಲ್ಲ ?

ವಿಶ್ವಾ—ನಾನು ನಿನಗೆ ಘೋರವಾದ ಅನಿಷ್ಟವನ್ನು ಮಾಡಬಲ್ಲೆ, ಗೊತ್ತೊ ?

ವಸಿಷ್ಠ—ಮಾಡಿದರೂ ಮಾಡಬಲ್ಲೆ, ನೀನು ನನ್ನ ನೂರು ಮಕ್ಕಳನ್ನು ರಾಕ್ಷಸನಿಂದ ಕೊಲ್ಲಿಸಿದೆ.

ವಿಶ್ವಾ—ಅಯ್ಯಾ ಬ್ರಾಹ್ಮಣ, ನೀನು ನನ್ನನ್ನು ಕ್ಷಮಿಸು. ಆ ದುಃಖವನ್ನು ಮರೆತುಬಿಡು. ನನ್ನ ನೂರು ಮಕ್ಕಳೂ ನಿನ್ನ ಬ್ರಹ್ಮತೇಜಸ್ಸಿನಿಂದ ಸುಟ್ಟುಹೋದರು. ಆಗತಕ್ಕದ್ದು ಆಗಿಹೋಯಿತು. ನೀನು ಪ್ರಸನ್ನನಾಗಿ ನನ್ನನ್ನು ಕ್ಷಮಿಸು.

ವಶಿಷ್ಠ—ನೀನು ಕ್ಷಮೆ ಬೇಡಬೇಕೆಂದು ನನಗೆ ಅಪೇಕ್ಷೆ ಇಲ್ಲ. ಎಷ್ಟೋ ದಿನಗಳ ಹಿಂದೆಯೇ ನಿನ್ನನ್ನು ಕ್ಷಮಿಸಿದೆ.

ವಿಶ್ವಾ—ಹಾಗಾದರೆ ನೀನು ನನ್ನ ಬ್ರಹ್ಮರ್ಷಿತ್ವವನ್ನು ಒಪ್ಪಿಕೊಳ್ಳದಿರುವದು ಯಾತಕ್ಕೆ ?

ವಶಿಷ್ಠ—ಯಾವುದು ಅಸತ್ಯ, ಅದನ್ನು ಒಪ್ಪಿಕೊಳ್ಳುವುದು ಹೇಗೆ ?

ವಿಶ್ವಾ—ಏನು, ತಿರುಗಿ ತಿರುಗಿ ಇದೇ ಮಾತು ನಿನ್ನದು?

ವಶಿಷ್ಠ—ಬ್ರಾಹ್ಮಣನ ವಾಕ್ಯವು ಅಚಲವಾದುದು. ನೀನು ಬ್ರಾಹ್ಮಣನಲ್ಲ, ಅದಕ್ಕೇ ನಿನಗೆ ಗೊತ್ತಿಲ್ಲ.

ವಿಶ್ವಾ—ನಿಜ, ನಿಜ, ಎಷ್ಟು ನಿನ್ನ ಡಂಭ! ಬ್ರಹ್ಮನ ಮಾತಿನ ಪ್ರಕಾರ ನಾನು ಬ್ರಹ್ಮರ್ಷಿ. ಅದನ್ನು ನೀನು ಒಪ್ಪುವುದಿಲ್ಲ. ಬ್ರಹ್ಮನಿಂದ ನಾನು ಶಕ್ತಿಯನ್ನು ಸಂಪಾದಿಸಿದ್ದೇನೆ ತಿಳಿದುಕೊ. ಆ ಶಕ್ತಿಯಿಂದ ನಿನ್ನನ್ನು ಧ್ವಂಸ ಮಾಡಬಲ್ಲೆ.

ವಶಿಷ್ಠ—ಇಷ್ಟವಿದ್ದರೆ ಕೊಲ್ಲು, ಯಾರು ಬೇಡವೆನ್ನುತ್ತಾರೆ ?

ವಿಶ್ವಾ—ನಾನು ನಿನಗೆ ಒಳ್ಳೆಯದಕ್ಕೆ ಹೇಳುತ್ತೇನೆ, ಇನ್ನು ನನ್ನನ್ನು ಉದಾಸೀನ ಮಾಡಬೇಡ. ನಾನು ಮುಂದಣ ಯಜ್ಞಮಾಡಿ ಮೂರು ಸಲ ನಿನ್ನ ಹೆಸರಿನಿಂದ ಆಹುತಿಯನ್ನು ಹಾಕಿದರೆ ತಕ್ಷಣ ನಿನ್ನ ತಲೆ

ಕುತ್ತಿಗೆಯಿಂದ ಕಳಚಿ ಯಜ್ಞ ಕುಂಡದಲ್ಲಿ ಬಿದ್ದು ಹೋಗುತ್ತದೆ. ನೀನು ಪುನಃ ಪುನಃ ನನ್ನನ್ನು ಅವ ಮಾನ ಪಡಿಸಿದರೆ ನಾನು ಆ ಮರಣಯಜ್ಞ ಮಾಡು ತ್ತೇನೆ.

ವಶಿಷ್ಠ—ನಾನು ಶಾಸ್ತ್ರಗಳಿಗೆ ಕಟ್ಟು ಬಿದ್ದವನು, ನಿನ್ನ ಇಷ್ಟಕ್ಕೆ ಕಟ್ಟು ಬಿದ್ದವನಲ್ಲ. ನಾನು ಶಾಸ್ತ್ರಕ್ಕೆ ಅಪ ಮರ್ಯಾದೆ ಮಾಡಿ ನಿನ್ನನ್ನು ಬ್ರಾಹ್ಮಣ ಎಂದು ಒಪ್ಪಿಕೊಳ್ಳುವುದಿಲ್ಲ. ನಾನು ಸಾಯುವುದಾದರೂ ಇಲ್ಲ.

ವಿಶ್ವಾ—ನೋಡಿಕೋ, ನಾನು ಖಂಡಿತ ನಿನ್ನ ಮರಣ ಯಜ್ಞ ಮಾಡುತ್ತೇನೆ.

ವಶಿಷ್ಠ—ಅದಕ್ಕೇನು ? ನಿನ್ನ ಇಷ್ಟವಿದ್ದಂತೆ ಮಾಡ ಬಹುದು.

ವಿಶ್ವಾ—ನೀನು ನನ್ನ ಬ್ರಹ್ಮರ್ಷಿತ್ವವನ್ನು ಒಪ್ಪಿಕೊಳ್ಳು ವುದಿಲ್ಲವೊ ? ಹೋಗಲಿ, ನನ್ನನ್ನು ಮಹರ್ಷಿ ಎಂದು ಒಪ್ಪುತ್ತೀಯೋ ?

ವಶಿಷ್ಠ—ಅಗತ್ಯವಾಗಿ ಒಪ್ಪುತ್ತೇನೆ. ಅಂಬರೀಷನ ಯಜ್ಞದಲ್ಲಿ ಸಮಸ್ತ ದೇವತೆಗಳೂ ಕೂಡ ನಿನ್ನನ್ನು ಮಹರ್ಷಿಯೆಂದು ವಂದಿಸಿದರು.

ವಿಶ್ವಾ—ನಾನು ನಾಳೆ ನಿನ್ನ ಮರಣ ಯಜ್ಞಕ್ಕೆ ಸಿದ್ಧ ಪಡಿಸಿಕೊಳ್ಳುತ್ತೇನೆ. ಪೌರೋಹಿತ್ಯವನ್ನು ವಹಿಸ

ಬೇಕೆಂದು ನಿನ್ನನ್ನು ಕರೆಯುತ್ತೇನೆ, ನೀನು ಯಜ್ಞಕ್ಕೆ ಬಂದು ನನ್ನ ಯಜ್ಞವನ್ನು ನಡೆಸಿಕೊಡಬೇಕು.

ವಶಿಷ್ಠ—ಅವಶ್ಯಕವಾಗಿ ಆಗಬಹುದು. ನೀನು ಮಹರ್ಷಿ, ನನ್ನನ್ನು ಕರೆಯುತ್ತಿ, ನಾನೆಂದಿಗೂ ಉಪೇಕ್ಷೆ ಮಾಡುವುದಿಲ್ಲ.

ವಿಶ್ವಾ—ಒಳ್ಳೇದು, ನೋಡೋಣ ನಿನ್ನ ದಾರ್ಢ್ಯವೆಷ್ಟೋ! ನಾನು ಹೀಗೆ ಪ್ರತಿಜ್ಞೆ ಮಾಡುತ್ತೇನೆ. ನೀನು ಬಂದು ನನ್ನ ಯಜ್ಞದಲ್ಲಿ ಪೌರೋಹಿತ್ಯವನ್ನು ವಹಿಸದೇ ಇದ್ದರೆ ನಾನು ಯಜ್ಞವನ್ನು ಮಾಡುವುದಿಲ್ಲ. ಆದರೆ ನಿನ್ನನ್ನು ಭೀರು, ಮಿಥ್ಯಾವಾದಿ, ಪೌರೋಹಿತ್ಯಕ್ಕೆ ಒಪ್ಪಿಕೊಂಡು ಬರಲಿಲ್ಲ, ಕಪಟಾಚಾರಿ, ಕಾಪುರುಷ ಎಂದು ಪ್ರಚಾರಮಾಡುತ್ತೇನೆ.

ವಶಿಷ್ಠ—ಬ್ರಾಹ್ಮಣ ವಾಕ್ಯವು ಅಲಂಘ್ಯವಾದುದು.

(ವಸಿಷ್ಠನು ಹೊರಟು ಹೋಗುವನು)

ವಿಶ್ವಾ—ಎಷ್ಟು ಡಂಭ! ಬ್ರಹ್ಮನ ವಾಕ್ಯದಲ್ಲಿ ಉಪೇಕ್ಷೆ! ಪುತ್ರಶೋಕ ಮರೆಯಲೂ ಇಲ್ಲ, ನನ್ನನ್ನು ಕ್ಷಮಿಸಲೂ ಇಲ್ಲ. ನನ್ನ ಮೇಲೆ ಶತ್ರುತ್ವವನ್ನು ಬೆಳೆಸುತ್ತಾ ಇದ್ದಾನೆ. ಇವನನ್ನು ಶಿಕ್ಷಿಸುವುದು ಅವಶ್ಯ ಕರ್ತವ್ಯ, ಇಲ್ಲದಿದ್ದರೆ ನನ್ನ ಜಪತಪಗಳೆಲ್ಲವೂ ನಿಷ್ಫಲವಾಗುತ್ತವೆ. ವಸಿಷ್ಠನ ಉತ್ತೇಜನದಿಂದ ಲೋಕದಲ್ಲಿ ಯಾರೂ ನನ್ನನ್ನು ಬ್ರಹ್ಮರ್ಷಿಯೆಂದು ಸ್ವೀಕಾರ ಮಾಡಿದಂತಾಗುತ್ತದೆ. ಯಜ್ಞಕ್ಕೆ ಏನಾದ

ರೂ ಬಂದರೆ, ನಾನು ಖಂಡಿತ ಅವನ ಮರಣ ಆಹುತಿಯನ್ನು ಹಾಕುತ್ತೇನೆ. ಅವನು ಬರದೇ ಹೋದರೆ ಅದೂ ನನಗೆ ಪರಮಮಂಗಳಕರವಾದದ್ದೆ? ಬ್ರಹ್ಮಹತ್ಯೆ ತಪ್ಪುತ್ತದೆ, ವಸಿಷ್ಠ ಮಿಥ್ಯಾಚಾರಿ ಎಂದು ಪ್ರಚಾರವಾಗುತ್ತದೆ. ವಸಿಷ್ಠನ ಮಾತಿನಲ್ಲಿ ಇನ್ನು ಮುಂದೆ ಯಾರೂ ನಂಬಿಕೆ ಇಡರು. ಎಲ್ಲರೂ ನನ್ನನ್ನು ಬ್ರಹ್ಮರ್ಷಿಯೆಂದು ಒಪ್ಪಿಕೊಳ್ಳುತ್ತಾರೆ.

(ಹೊರಟು ಹೋಗುವನು.)

## ೪. ಕಾಡುದಾರಿ.

(ಕಾಲುಮಡಿಸಿಕೊಂಡು ಮೊಣಕಾಲುಮೇಲೆ ಕೈಯೂರಿ ತಲೆಬಗ್ಗಿಸಿಕೊಂಡಿರುವ ಸದಾನಂದ)

(ಪ್ರವೇಶ-ಬ್ರಹ್ಮಣ್ಯದೇವ)

ಬ್ರಹ್ಮಣ್ಯ—ಏನು ಮಾಡುತ್ತಾ ಇದ್ದಿ ?

ಸದಾ—(ಎದ್ದು) ಇದೇನು, ಹುಡುಗ, ಇಷ್ಟುದಿನ ಎಲ್ಲಿದ್ದೆ ? ಎಲ್ಲಿ ಕಾಣಲಿಲ್ಲ ?

ಬ್ರಹ್ಮ—ನೀನೆಲ್ಲಿದ್ದೆ ?

ಸದಾ—ಒಳ್ಳೇದು, ಹುಡುಗ, ನೀನೇನು ಹೆಣ್ಣುಹುಡುಗಿಯೋ ಗಂಡು ಹುಡುಗನೋ? ಹೆಣ್ಣು ಹುಡುಗಿಯಾಗಿ ಗಂಡು ಹುಡುಗನ ವೇಷ ಹಾಕಿಕೊಂಡು ಓಡಾಡುತ್ತಿಯೇನು ?

ಬ್ರಹ್ಮ—ಯಾಕೆ ? ಹೇಳು ನೋಡೋಣ.

ಸದಾ—ನಿನ್ನೊಡನೆ ಎಷ್ಟೋ ವರ್ಷಗಳಿಂದ ಪರಿಚಿತನಾಗಿದ್ದೇನೆ, ನೀನೇನೋ ನಿನ್ನ ಚಹರೆಗಳನ್ನು ಒಂದೇ ಸಮವಾಗಿಟ್ಟುಕೊಂಡಿದ್ದಿ. ಹೆಚ್ಚೂ ಆಗಲಿಲ್ಲ, ಕಡಿಮೆಯೂ ಆಗಲಿಲ್ಲ.

ಬ್ರಹ್ಮ—ನನ್ನದು ಯೋಗಶರೀರ, ಆದ್ದರಿಂದಲೇ ಹಾಗಿರುವುದು.

ಸದಾ—ಯೋಗಶರೀರ ಎಂದರೆ ಎಂಥಾದ್ದದು ?

ಬ್ರಹ್ಮ—ಅದೂ ಒಂದು ತರಹ.

ಸದಾ—ಅದಕ್ಕೆ ಎಷ್ಟು ಹೊಟ್ಟೆ ? ಒಳ್ಳೆ ಜಬರದಸ್ತಿನ ಹೊಟ್ಟೆ ಇರಬಹುದಲ್ಲವೆ? ಅದರಿಂದ ಎಷ್ಟು ಜನ ಯಜಮಾನರು ಕರೆದರೂ ಸರಿಯೆ? ದಿವ್ಯ ಆಹಾರ ಸೇರುತ್ತೆ !

ಬ್ರಹ್ಮ—ನೀನೇನು ಮಾಡುತ್ತಿ ?

ಸದಾ—ಮಹಾ ವಿಪತ್ತು, ಅಣ್ಣ, ಮಹಾವಿಪತ್ತು.

ಬ್ರಹ್ಮ—ಏನು ವಿಪತ್ತು ?

ಸದಾ—ಇದೇ ನೋಡು, ಒಂದೇ ದಿವಸ ಐದೈದು ನಿಮಂತ್ರಣ.

ಬ್ರಹ್ಮ—ಹಾಗಿದ್ದರೆ ಪ್ರಯೋಜನವೇನು ?

ಸದಾ—ನಾಲ್ಕು ಕಾಲಿನಮೇಲೆ ನಡೆದರೆ ಹೊಟ್ಟೆ ಬೆಳೆಯುತ್ತಂತೆ. ದನಗಳು ನಾಲ್ಕು ಕಾಲ ಮೇಲೆ ನಡೆದು

ಹೆಚ್ಚಾಗಿ ತಿನ್ನುತ್ತಾವೆ. ಆದ್ದರಿಂದಲೇ ಹಸಿವೆ ಮಾಡಿಕೊಳ್ಳುತ್ತಿದೇನೆ.

ಬ್ರಹ್ಮ—ನಿನಗೇನು ತಿನ್ನುವ ಆಸೆ ಕಡಮೆಯಾಗಲಿಲ್ಲವೇನು ?

ಸದಾ—ತಿನ್ನಬೇಕೆಂಬ ಆಸೆ ಕಡಮೆಯಾಗುತ್ತೆ ಅಣ್ಣಾ. ನಾಲಿಗೆಯನ್ನು ಜಯಿಸುವುದು ಕಷ್ಟ. ಎಂಥೆಂಥಾ ರುಚಿಯಾದ ಪದಾರ್ಥಗಳನ್ನು ಎಷ್ಟೆಷ್ಟು ತಿಂದರೂ ತೃಪ್ತಿಯಾಗುವುದಿಲ್ಲ. ನಿನಗೆ ಗೊತ್ತಾಗುವುದಿಲ್ಲ. ನಿನಗಿಂತ ಐದರಷ್ಟು ಅಲೆದಿದ್ದೇನೆ. ಏನೂ ಸುಖವಿಲ್ಲ.

ಬ್ರಹ್ಮ—ನಾನು ಬಾಯಿಂದ ತಿನ್ನುವುದಿಲ್ಲ. ಕಣ್ಣಿಂದ.

ಸದಾ—ಹಾಗೇ ? ನನಗೂ ಅದನ್ನು ಹೇಳಿಕೊಟ್ಟರೆ, ನಮ್ಮೂರಿನ ಆನಂದಭವನವನ್ನು ಲೂಟಿಮಾಡಿಬಿಡುತ್ತೇನೆ.

ಬ್ರಹ್ಮ—ನೀನು ಮನಸ್ಸಿನಲ್ಲಿ ಯೋಚಿಸಿದ್ದನ್ನು ಮಾಡಬಲ್ಲೆ-ಮನಸ್ಸು ಮಾಡಿದರೆ ತಿನ್ನದೆಯೇ ಇರಬಲ್ಲೆ.

ಸದಾ—ನಿನ್ನ ಶತ್ರುಬೇಕಾದರೆ ತಿನ್ನದೆ ಇರಲಿ.

ಬ್ರಹ್ಮ—ನೀನು ದೇವತೆಗಳಿಗೆ ಪ್ರೀತಿಪಾತ್ರನಾದ ಬ್ರಾಹ್ಮಣ-ನೀನೋ ಬಹಳ ಸರಳಪ್ರಾಣಿ. ನಿನಗೆ ಒಳಗೂ ಹೊರಗೂ ಬ್ರಹ್ಮಣ್ಯ ದೇವನಿದ್ದಾನೆ. ಇನ್ನು ನಿನಗೆ ತಿನ್ನಬೇಕಾದ ಅವಶ್ಯಕತೆಯೇನಪ್ಪಾ ?

ಸದಾ—ನನ್ನ ಅವಶ್ಯಕತೆ ನಿನಗೆ ಹೇಗೆ ಗೊತ್ತಾದೀತು? ಎಲ್ಲಾ ತಾಪತ್ರಯವನ್ನೂ ನುಂಗಿಕೊಂಡಿದ್ದೇನ ಯ್ಯಾ ನಾನು. ಇನ್ನು ಯಾರಾದರೂ ಆಗಿದ್ದರೆ ಇಷ್ಟು ಹೊತ್ತಿಗೆ ಉಸಿರುಸಿಕ್ಕಿಕೊಂಡು ಸತ್ತುಹೋಗು ತ್ತಿದ್ದರು.

ಬ್ರಹ್ಮಣ್ಯ—ಅದೇನಯ್ಯಾ ನಿನ್ನ ತಾಪತ್ರಯ? ಹೇಳು.

ಸದಾ—ಅಣ್ಣಯ್ಯಾ! ಕೇಳು. ಜಯಿಸುವುದಕ್ಕಾಗದ ನನ್ನ ನಾಲಿಗೆಯಂತಹ ನಾಲಿಗೆ ನಿನಗೆ ಇದ್ದಿದ್ದರೆ ಗೊತ್ತಾಗುತ್ತಿತ್ತು. ಬೆಳಗಿನ ಜಾವದಲ್ಲಿ ಎದ್ದು ಕೃಷ್ಣರಾಯರ ಶ್ರಾದ್ಧದ ವಿಷಯವನ್ನು ನಾಲಿಗೆ ಯೇನಾದರೂ ನೆನೆಸಿಕೊಂಡು ಬಿಟ್ಟರೆ, "ತಿನ್ನ ಬೇಕು, ತಿನ್ನಬೇಕು" ಎಂದು ಸುಮ್ಮನೆ ಆತುರಪ ಡುತ್ತಿರುತ್ತೆ. ಇನ್ನು ಯಾವುದಾದರೂ ತಿಂಡಿ ಮನ ಸ್ಸಿಗೆ ಜ್ಞಾಪಕ ಬಂದಿತೋ, ಯಾರ ಮಗುವಿಗೆ ಅನ್ನ ಪ್ರಾಶನ, ಯಾರ ಸಪಿಂಡೀ ಕರಣ, ಯಾರ ಮನೆಯಲ್ಲಿ ಸಂಕ್ರಾಂತಿ ಹಬ್ಬ, ಇವುಗಳೆಲ್ಲಾ ರಾಕ್ಷಸರ ಹಾಗೆ ನನ್ನ ಮುಂದೆ ಕುಣಿಯುವುದಕ್ಕೆ ಆರಂಭಿಸಿ ಬಿಡು ತ್ತವೆ. ಇಂಥಾ ಸಂದರ್ಭದಲ್ಲಿ ನನ್ನ ಪ್ರಾಣ ಉಳಿ ಯುತ್ತದೆಯೇ? ಅಣ್ಣಯ್ಯಾ! ಹೋಗಲಿ. ಆ ಮಾ ತು ಬಿಡು. ಈಗ ಎಲ್ಲಿಯಾದರೂ ಯಜ್ಞಗಿಜ್ಞ ನಡೆ ಯುವ ಸಂಭವವುಂಟೋ? ಹೇಳು.

ಬ್ರಹ್ಮ—ಇಲ್ಲ. ನಿನ್ನನ್ನು ಯಾವುದೋ ಒಂದು ಪದಾ

ರ್ಥವನ್ನು ಕೇಳಬೇಕೆಂದು ಬಂದೆ.

ಸದಾ—ಒಳ್ಳೆಯುವನನ್ನೇ ಹಿಡಿದೆ. ನಿನ್ನನ್ನು ನೋಡಿದರೆ ಇಂಥಾ ಚಾಲಕ್ಕಿನ ಮನುಷ್ಯ. ನಾನು ಅವರಿವರ ಮನೆಯಲ್ಲಿ ಏನಾದರೂ ಸಿಕ್ಕಿದರೆ ತಿಂದು ಕೊಂಡು ಅಲೆಯುತ್ತಿರುವವನು. ನನ್ನ ಹತ್ತಿರ ಏನು ತೆಗೆದುಕೊಳ್ಳಬೇಕೆಂದು ಬಂದೆ ? ಹೇಳು.

ಬ್ರಹ್ಮಣ್ಯ—ಇಷ್ಟೇ-ನೀನು ಅವರಿವರ ಮನೆಯಲ್ಲಿ ಊಟ ಮಾಡುವುದನ್ನೇ.

ಸದಾ—ನನ್ನ ಪ್ರಾಣವನ್ನೇ ತೆಗೆಯಬೇಕೆಂದು ಬಂದೆ! ಏನಣ್ಣಯ್ಯಾ? ನಾನೇನು ನಿನಗೆ ಅಂಥಾದ್ದನ್ನು ಮಾಡಿದ್ದು ? ಅಲ್ಲಲ್ಲಿ ಊಟಮಾಡಿಕೊಂಡಿರುವುದಕ್ಕೇ ಕಲ್ಲು ಹಾಕಲು ಬಂದಿದ್ದೀ ?

ಬ್ರಹ್ಮ—ನಿನ್ನಲ್ಲಿ ನನಗೆ ಬಹಳ ಪ್ರೀತಿ.

ಸದಾ—ಹೌದು. ಹೌದು. ಅದಕ್ಕೇ ನನ್ನ ಕತ್ತನ್ನು ಹಿಸುಕುವುದಕ್ಕೆ ಬಂದಿದ್ದೀಯೆ. ನೆಂಟರ ಕೆಲಸ ಮಾಡುವುದಕ್ಕೆ ಬಂದಿದ್ದೀಯೆ.

ಬ್ರಹ್ಮಣ್ಯ—ನಿಜ. ಹಗಲೂ ರಾತ್ರಿ ನಾನು ನಿನ್ನ ಜೊತೆಯಲ್ಲಿಯೇ ಇದ್ದೇನೆ. ನಿನ್ನ ಈ ಭಿಕ್ಷಾವೃತ್ತಿಯನ್ನು ನೋಡಲಾರೆ. ಇದರಿಂದ ನಿನ್ನನ್ನು ಪಾರುಮಾಡಬೇಕೆಂದು ನನಗೆ ಬಹಳ ಆಸೆ.

ಸದಾ—ಅದೇಕಣ್ಣಯ್ಯಾ, ಈ ತಪ್ಪನ್ನು ನನ್ನ ಮೇಲೇ

ಹೊರಿಸುತ್ತೀ? ನಿನ್ನ ಭಿಕ್ಷಾವೃತ್ತಿಯನ್ನು ನೋಡಿದರೆ ನನಗೇ ಆಶ್ಚರ್ಯವಾಗುತ್ತೆ. ಆ ದಿನ ಹೊಲೆಯರ ಹೆಂಗಸಿನ ನೀರಿನಲ್ಲಿ ನೆನಿಸಿದ ಅನ್ನವನ್ನು ನೀನು ಕಸುಕೊಂಡದ್ದನ್ನು ನೋಡಿ ನನಗೆ ಪರಮಾಶ್ಚರ್ಯವಾಯಿತು.

ಬ್ರಹ್ಮ—ನಾನು ಹಾಗೆ ಮಾಡದಿದ್ದರೆ ಅವಳು ದುಃಖಪಡಬೇಕಾಗುತ್ತಿತ್ತು.

ಸದಾ—ಅಣ್ಣಯ್ಯಾ! ಆ ಹೊಲೆಯರ ಹೆಂಗಸಿನ ದುಃಖ ನಿನ್ನ ಮನಸ್ಸಿಗೆ ಬಂತು. ನಾನು-ಬ್ರಾಹ್ಮಣರ ಹೊಟ್ಟೆಯಲ್ಲಿ ಹುಟ್ಟಿದವನು-ನನ್ನ ಹೊಟ್ಟೆಯ ಮೇಲೆ ಹೊಡೆಯುತ್ತೀಯಲ್ಲಾ? ಸ್ವಲ್ಪ ಯೋಚಿಸಿನೋಡು. ಅಣ್ಣಯ್ಯಾ! ಹಾಗೇ ಆಲೋಚನೆ ಮಾಡಿನೋಡು.

ಬ್ರಹ್ಮ—ಸರಿ. ನಿನಗೆ ಹೊಟ್ಟೆಯೇ ಹಸಿಯದಂತೆ ಮಾಡುವ ಪದಾರ್ಥವನ್ನು ಕೊಟ್ಟರೆ?

ಸದಾ—ಆಗಲಿ. ಅಣ್ಣಯ್ಯಾ! ಹೇಳು ಮತ್ತೆ? ಸಿಹಿತಿಂಡಿ ಕಂಡರೆ ನಾಲಗೆಯ ಹೊಡೆತ! ಒಳ್ಳೆಯದು ಕೆಟ್ಟದ್ದು ಎಂಬ ಭೇದವೇ ಇಲ್ಲ. ಕಂಡರೆ ಸರಿ "ಕೊಡು, ಕೊಡು, ನನಗೆ ಕೊಡು" ಎನ್ನುತ್ತದೆ. ಹೊಟ್ಟೆಯೋ "ನಾನು ಹೋಗುತ್ತೇನೆ" ಎನ್ನುವುದು. ನಾಲಿಗೆಯು "ಹೋದೆ, ಹೋದೆ. ನನ್ನ ಇದೇ ಹೋಯಿತು. ಸಾಯಬೇಕಾಗಿದೆ. ನೀನು ಒಡೆದು ಸಾ

ಯಿ. ನಾನು ಮೃಷ್ಟಾನ್ನವನ್ನು ಬಿಟ್ಟಿರಲಾರೆ'' ಎನ್ನು ತ್ತದೆ.

ಬ್ರಹ್ಮಣ್ಯ—ನೀನೊಂದು ಕೆಲಸವನ್ನು ಮಾಡಿದರೆ ನಿನ್ನ ನಾಲಿಗೆಯಲ್ಲಿ ಹಗಲೂ ರಾತ್ರಿ ಅಮೃತದ ರುಚಿಯೇ ಇರುತ್ತೆ.

ಸದಾ—ಅಣ್ಣಯ್ಯಾ! ಅದನ್ನು ಮೊದಲು ಹೇಳಿಬಿಡು. ನಿನ್ನ ಗುಲಾಮನಾಗಿರುತ್ತೇನೆ. ಹೇಳು. ನಾನೇನು ಮಾಡಬೇಕು, ಹೇಳು-ಹೇಳುವುದಿಲ್ಲವೆ?

ಬ್ರಹ್ಮ—ಇಷ್ಟೇ-ಆಸೆಯನ್ನು ಕಟ್ಟಬೇಕು.

ಸದಾ—ಒಳ್ಳೆಯ ಮಾತನ್ನು ಹೇಳಿದೆ. ನಾನು ನನ್ನ ರೋಗವನ್ನು ವಾಸಿಮಾಡಿಕೊಳ್ಳುತ್ತೇನೆ. ಆ ಮೇಲೆ ನೀನು ಔಷಧವನ್ನು ಕೊಡುತ್ತೀಯೋ?

ಬ್ರಹ್ಮ—ಹೌದು. ಬಹಳ ಸುಲಭ.

ಸದಾ—ಸುಲಭವೇನೋ ಹೌದು. ನೀನು ಮಾಡಬೇಡ, ಕಣ್ಣಿಂದಲೇ ತಿಂದುಬಿಡು, ಬಾಯಿಂದಲೂ ತಿನ್ನು, ನಾಲ್ಕಾರು ಕಡೆಗಳಲ್ಲಿ ತಿಂದು ಅಲೆಯುತ್ತಿರಬೇಕು?

ಬ್ರಹ್ಮ—ಏನು ಮಾಡಲಿ? ಹೇಳು. ನನ್ನನ್ನು ಬಿಡುವುದಿಲ್ಲವಲ್ಲಾ?

ಸದಾ—ನಿನಗೆ ಹೇಗೋ ನನ್ನ ನಾಲಿಗೆಗೂ ಹಾಗೆಯೇ.

ಬ್ರಹ್ಮ—ನೀನೊಂದು ಕೆಲಸ ಮಾಡು ನೋಡೋಣ.

ಒಂದು ಮುಹೂರ್ತಕಾಲ ನಾನು ಹೇಳುವುದನ್ನು ಮಾಡು. ನೋಡೋಣ.

ಸದಾ—ಹೇಳು. ಬದುಕುತ್ತೇನೆಯೋ ಸಾಯುತ್ತೇನೆಯೋ ನೋಡೋಣ.

ಬ್ರಹ್ಮ—ಒಂದು ಸಾರಿ ಗಾಯತ್ರಿ ಜಪಮಾಡು. ನೋಡೋಣ.

ಸದಾ—ಅಷ್ಟೇಯೇ? ಅಣ್ಣಯ್ಯಾ! ಅದನ್ನು ಮರೆತು ಬಿಟ್ಟು ಬಹಳ ದಿವಸಗಳಾಯಿತು.

ಬ್ರಹ್ಮ—ನಾನು ನಿನಗೆ ಹೇಳಿಕೊಡುತ್ತೇನೆ, ಕೇಳು—ನಾನು ನಿನ್ನ ಕಿವಿಯಲ್ಲಿ ಹೇಳುತ್ತೇನೆ ಕೇಳು.

(ಸದಾನಂದನ ಕಿವಿಯಲ್ಲಿ ಬ್ರಹ್ಮಣ್ಯ ದೇವನು ಗಾಯತ್ರಿಯನ್ನು ಹೇಳುವನು)

ಸದಾ—(ಕಣ್ಣು ಮುಚ್ಚಿಕೊಂಡು) ಅದು ಸರಿ. ಇದೇನಾಯಿತು. ಇದೇನು ಇಂದ್ರಜಾಲ! ಎಂಥಾ ಮಾಯ! ಆ ವಂಶಹೀನನಾದ ಗಂಡು ಏನು ಮಂತ್ರ ಕೊಟ್ಟುಬಿಟ್ಟಿತು? ನನ್ನ ಕಣ್ಣಿಗೆ ಎಲ್ಲಾ ಸುತ್ತುತ್ತಾ ಇದೆ. ಕೊಡು, ಕೊಡು, ತಾಯಿ! ಎಲ್ಲಿಗೆ ಕರೆದು ಕೊಂಡು ಹೋಗುತ್ತೀ? ಕೊಡು. ತಾಯಿ! ನೀನೆಲ್ಲಿರುವೆ?

(ವೇದಮಾತೆಯು ಬರುವಳು)

ವೇದ—ಇಲ್ಲಿದ್ದೇನೆ, ಮಗು! ನಾನು ಹಗಲೂ ರಾತ್ರಿ ನಿನ್ನ ಹೃದಯದಲ್ಲಿಯೇ ಇದ್ದೇನೆ.

ಸದಾ—ತಾಯಿ ! ಇಷ್ಟು ದಿನ ನನಗೆ ಸಾಮಾನ್ಯ ಪೃಷ್ಟಾನ್ನದ ರುಚಿ ತೋರಿಸಿ ಮರೆಸಿಬಿಟ್ಟಿದ್ದೆ ?

ವೇದ—ಮಗು ! ಆಡುವುದಕ್ಕೆ ಬಂದಿದ್ದಿ. ಕಣ್ಣು ಮುಚ್ಚಿಕೊಂಡು ಆಡು. ಆಟ ಮುಗಿದ ಮೇಲೆ ನಿನ್ನನ್ನು ಕರೆದುಕೊಂಡು ಹೋಗುತ್ತೇನೆ.

ಬ್ರಹ್ಮ—ನಡೆ, ನಡೆ. ಒಂದು ಯಜ್ಞ ನಡೆಯುತ್ತದಂತೆ ನೋಡೋಣ.

ಸದಾ—ಎಲೆ, ಹುಡುಗಾ! ನಿನ್ನ ಚಾತುರ್ಯವು ಗೊತ್ತಾಯಿತು. ನಾಲ್ಕಾರು ಮನೆಗಳಲ್ಲಿ ಅಲೆಯುವುದೇ ನಿನ್ನ ಕೆಲಸ. ನಾನು ನಿನ್ನ ಹಾಗೆ ಇಂದ್ರಜಾಲ ಮಾಡುವುದಿಲ್ಲ. ನಾನು ಅಮ್ಮನನ್ನು ಗುರ್ತುಹಿಡಿದಿದ್ದೇನೆ.

(ಎಲ್ಲರೂ ತೆರಳುವರು)

## ೫. ಗರ್ಭಾಂಕ.

ವಸಿಷ್ಠರ ಆಶ್ರಮದ ಮುಂಭಾಗ.

(ಪ್ರವೇಶ- ವಸಿಷ್ಠ, ಆತನ ಹಿಂದೆ ಅರುಂಧತಿ.)

ಅರುಂ—ಪ್ರಭು, ವಿಶ್ವಾಮಿತ್ರನ ಯಜ್ಞಕ್ಕೆ ಹೋಗುತ್ತೀರಾ ?

ವಶಿ—ಸಾಧ್ವಿ, ಇಷ್ಟು ಯಾಕೆ ಭಯಪಡುತ್ತಿರುವೆ ?

ಅರುಂ—ತಮ್ಮ ಮರಣ ಯಜ್ಞ, ತಾವೇ ಪೌರೋಹಿತ್ಯಕ್ಕೆ ಒಪ್ಪಿ ಆ ಯಜ್ಞವನ್ನು ಪೂರೈಸುತ್ತೀರಾ ?

ನಿಜವಾಗಿಯೂ ಬ್ರಹ್ಮನು ಆತನಿಗೆ ವರವನ್ನು ಕೊಟ್ಟು ಬಿಟ್ಟಿದ್ದರೆ, ಆತನ ಬ್ರಹ್ಮರ್ಷಿತ್ವವನ್ನು ಒಪ್ಪಿಬಿಟ್ಟರೆ ಎಲ್ಲಾ ವಿಘ್ನಗಳೂ ಹೋಗುವುವು. ಆದರೆ ನಾನು ಹೀನಬುದ್ಧಿಯ ಹೆಂಗಸು. ನಾನು ಹೇಳಿದರೆ ಶೋಭಿಸುವದಿಲ್ಲ, ತಮ್ಮ ಚರಣದಲ್ಲಿ ನಾನೇನೋ ಅಪರಾಧ ಮಾಡಿದ್ದೇನೆಂತಾ ಕಾಣುತ್ತೆ. ಇಲ್ಲದೇ ಇದ್ದರೆ ಹೀಗೆ ಪೆಟ್ಟನ್ನು ಕೊಡಲಿಕ್ಕೆ ಯಾಕೆ ಯತ್ನಿಸುತ್ತಿದ್ದಿರಿ? ನಾನು ಪುತ್ರಶೋಕಾತುರಳು, ಮನಸ್ಸಿಗೆ ಏನು ಸಮಾಧಾನ ಹೇಳಲಿ! ಸ್ವಾಮಿಯು ಮೃತ್ಯು ಮುಖದಲ್ಲಿ ನುಗ್ಗುವುದನ್ನು ನೋಡಿ ಹೇಗೆ ತಾನೇ ಧೈರ್ಯವಾಗಿರಲಿ? ಆಜೀವನವೂ ತಮ್ಮ ಶ್ರೀ ಚರಣಧ್ಯಾನ, ಸೇವೆಗಳ ಹೊರತು ಈ ದಾಸಿಗೆ ಬೇರೆ ಆಸೆಗಳಿಲ್ಲ. ನನ್ನ ದೇವಸೇವಾಕಾರ್ಯ ಇಷ್ಟು ದಿನಗಳಲ್ಲಿಯೇ ಕೊನೆಗಾಣಬೇಕೇ? ನನಗೇನೋ ದಶದಿಕ್ಕುಗಳೂ ಶೂನ್ಯವಾದಂತಿವೆ ಪ್ರಭು, ಮನಸ್ಸಿಗೆ ಹೇಗೆ ಸಮಾಧಾನ ಮಾಡಿಕೊಳ್ಳಲಿ?

ವಶಿ—ಅರುಂಧತಿ, ನೀನೇಕೆ ಆತ್ಮವಿಸ್ಮೃತಿಯನ್ನುಹೊಂದುತ್ತಿ? ಪ್ರಾಣ ಸಂರಕ್ಷಣಾರ್ಥವಾಗಿ ಬ್ರಹ್ಮದಂಡ ಪ್ರಭಾವದಿಂದ ವಿಶ್ವಾಮಿತ್ರನ ವಧೆಗೆ ಪ್ರಯತ್ನಿಸಿದಾಗ, ನೀನೇ ಅದನ್ನು ಬಿಡಿಸಿ "ಬ್ರಾಹ್ಮಣನಿಗೆ ಜನ್ಮ ಮೃತ್ಯುಗಳ ಕಡೆ ಎಲ್ಲಿಯ ಲಕ್ಷ್ಯ" ಎಂದು ಹೇಳಲಿಲ್ಲವೆ? ವಿಶ್ವಾಮಿತ್ರನ ಕೌಶಲದಿಂದ ನಿನ್ನ ನೂರು ಮಕ್ಕಳು ನಷ್ಟವಾದಾಗ, ನಿನ್ನ ಶಾಪದಿಂದ

ವಿಶ್ವಾಮಿತ್ರನು ಭಸ್ಮವಾಗಬಹುದಾಗಿತ್ತು, ನೀನು ಯಾಕೆ ಅವನಿಗೆ ಶಾಪಕೊಡಲಿಲ್ಲ ? ನೀನು ವಿದ್ಯಾಶಕ್ತಿ, ನೀನೇ ನನಗೆ ಕರ್ತವ್ಯವನ್ನೂ ಕ್ಷಮಾಗುಣವನ್ನೂ ಕಲಿಸಿರುವಳು. ಸಾಧ್ವಿ! ನನ್ನನ್ನು ಕರ್ತವ್ಯಕಾರ್ಯ ವಿಮುಖನಾಗುವಂತೆ ಮಾಡಲು ಯಾಕೆ ಯತ್ನಿಸುತ್ತೀ? ವಿಶ್ವಾಮಿತ್ರನು ಮಹರ್ಷಿ, ನನ್ನನ್ನು ಪೌರೋಹಿತ್ಯಕ್ಕೆ ಕರೆದಿದ್ದಾನೆ. ಆತನ ಕೋರಿಕೆಯನ್ನು ತಾತ್ಸಾರ ಮಾಡಿದರೆ ಮಹರ್ಷಿಗೆ ಅಪಮರ್ಯಾದೆ ಮಾಡಿದಂತಾಗುತ್ತದೆ. ಇದರ ಮೇಲೆ ಮುಖ್ಯವಾಗಿ ವಿಶ್ವಾಮಿತ್ರನ ಮನಸ್ಸಿನಲ್ಲಿ ನಾನು ಈರ್ಷೆಯಿಂದ ಆತನ ಬ್ರಾಹ್ಮಣತ್ವವನ್ನು ಸ್ವೀಕಾರ ಮಾಡುವುದಿಲ್ಲವೆಂಬ ಭ್ರಮೆ ಇದೆ. ನಾನು ಬ್ರಾಹ್ಮಣ, ಆ ಭ್ರಮೆಯನ್ನು ದೂರಮಾಡುವುದು ನನ್ನ ಮುಖ್ಯ ಕರ್ತವ್ಯ. ನಾನು ಯಜ್ಞಕ್ಕೆ ಹೋದರೆ ಬ್ರಾಹ್ಮಣತ್ವವು ಯಾವುದು ಎಂಬುದು ವಿಶ್ವಾಮಿತ್ರನ ಕಣ್ಣಿಗೆ ಕಾಣುತ್ತದೆ. ಈರ್ಷೆಯಿಂದಲ್ಲ, ಅವನಲ್ಲಿರುವ ಬ್ರಾಹ್ಮಣತ್ವದ ಅಭಾವದಿಂದಲೇ ನಾನು ಅವನ ಬ್ರಾಹ್ಮಣತ್ವವನ್ನು ಒಪ್ಪದಿರುವುದು ಎಂಬುದು ಅವನಿಗೆ ಗೊತ್ತಾಗುತ್ತದೆ. ನನ್ನ ಈ ಕ್ಷಣಭಂಗುರವಾದ ದೇಹ ತ್ಯಾಗದಿಂದ ತಪಸ್ವಿಯಾದ ವಿಶ್ವಾಮಿತ್ರನಿಗೆ ಬುದ್ಧಿ ಬರುವುದಾದರೆ, ನಾನು ನೂರುಸಲ ಬೇಕಾದರೂ ದೇಹತ್ಯಾಗ ಮಾಡಬಲ್ಲೆ. ನೀನು ನನ್ನ ಸಹಧರ್ಮಿಣಿ, ಚಿತ್ತಚಾಂಚಲ್ಯವಿಲ್ಲದೆ ಸಹನೆ

ಯಿಂದಿರು. ಧೈರ್ಯ ಧಾರಣ ಶಿಕ್ಷೆಯನ್ನು ಹೊಂದು ವುದಕ್ಕಾಗಿಯೇ ಬ್ರಾಹ್ಮಣಗೃಹದಲ್ಲಿ ದೇಹಧಾರಣ ಮಾಡಿದ್ದಿ, ಬ್ರಾಹ್ಮಣನ ಸಹಧರ್ಮಿಣಿಯಾಗಿದ್ದಿ. ಸಾಧ್ವಿ? ಇದನ್ನು ಚನ್ನಾಗಿ ಗ್ರಹಿಸು, ಕರ್ತವ್ಯ ಪಥ ವು ಕುಸುಮಾವೃತವಲ್ಲ.

ಅರುಂ—ಪ್ರಭು, ಇನ್ನು ನಾನು ತಮ್ಮನ್ನು ತಡೆಯುವು ದಿಲ್ಲ. ಆದರೆ ಕಣ್ಣೀರನ್ನು ಮಾತ್ರ ಕ್ಷಮಿಸಿ-ನಾನು ಹೆಂಗಸು, ಮನೋವ್ಯಾಕುಲವನ್ನು ಹೇಗೆ ತಾನೇ ತಡೆಯಲಿ ! ಒಂದು ಸಲ ಪಾದ ಪದ್ಮವನ್ನು ವಕ್ಷ ದಲ್ಲಿರಿಸೋಣವಾಗಲಿ, ಇಲ್ಲದೇ ಹೋದರೆ ಹೃದಯ ಪಂಜರವನ್ನು ಭೇದಿಸಿಕೊಂಡು ಈಗ ಪ್ರಾಣವು ತಮ್ಮ ಹಿಂದೆ ಹಿಂದೆಯೇ ಹೊರಡುತ್ತದೆ. ಧೈರ್ಯ! ಎಲ್ಲಿಯ ಧೈರ್ಯ ! ಪತಿಯೇ ಧೈರ್ಯ, ಪತಿಯೇ ಜೀವನ, ಪತಿಯೇ ಪ್ರಾಣ, ನಾನು ಹೇಗೆ ಧೈರ್ಯ ವಾಗಿರಲಿ? ಮಹಾ ಕಠೋರವಾದ ಕರ್ತವ್ಯ. ನನಗೆ ಧೈರ್ಯಧಾರಣಶಕ್ತಿಯನ್ನು ತಾವೇ ಕೊಡಬೇಕು, ನಾನು ಬಹಳ ಅಧೀರಳು.

ವಸಿ—ನಾರಾಯಣನನ್ನು ಆಶ್ರಯಿಸು, ಆತನೇ ನಿನಗೆ ಧೈರ್ಯವನ್ನು ಅನುಗ್ರಹಿಸುತ್ತಾನೆ.

ಅರುಂ—ಪ್ರಭು, ನನ್ನ ಭಾಗದ ನಾರಾಯಣಮೂರ್ತಿ ಎದುರಿಗೇ ಇದ್ದಾನೆ, ಮತ್ತಾವ ನಾರಾಯಣಮೂರ್ತಿ ಗೂ ಎಂದೂ ನನ್ನ ಹೃದಯದಲ್ಲಿ ಸ್ಥಾನ ದೊರೆತಿಲ್ಲ.

ವಸಿ—ಸಾಧ್ವಿ, ನನ್ನ ಆಶೀರ್ವಾದದಿಂದ ನಿನ್ನ ಹೃದಯದಲ್ಲಿ ಎಡಬಿಡದೆ ಆತನು ವಾಸಿಸುತ್ತಾನೆ.

(ಹೊರಡಲು ಆರಂಭಿಸುವನು)

(ವೇಗವಾಗಿ ಅದೃಶ್ಯಂತಿ ಬರುವಳು)

ಅದೃಶ್ಯಂತಿ—ಅಪ್ಪಾ, ಅಪ್ಪಾ, ಎಲ್ಲಿ ಹೋಗುತ್ತೀರಿ; ಪತಿವಿಹೀನಳಾದ ಕನ್ಯೆಯನ್ನು ಅಪಾರವಾದ ದುಃಖ ಸಾಗರದಲ್ಲಿ ಮುಳಿಗಿಸಿ ಬಿಡಬೇಡಿ, ಬಾಲಕ ಪರಾಶರನನ್ನು ಕೈ ಬಿಡಬೇಡಿ. ತಂದೆ, ನಾವು ದಿಕ್ಕಿಲ್ಲದವರು, ದಿಕ್ಕಿಲ್ಲದವರಿಗೆ ನೀವೇ ದಿಕ್ಕು. ನೀವೇ ಬಿಟ್ಟರೆ ನವುಗೆ ಗತಿಯೇನು? ನಿಷ್ಠುರರಾಗಬೇಡಿರಿ, ನಮ್ಮನ್ನು ಬಿಟ್ಟರೂ ಚಿಂತೆಯಿಲ್ಲ, ಪರಾಶರನನ್ನು ಬಿಡಬೇಡಿ. ಅವನು ತಂದೆ ಇಲ್ಲದಮಗು, ತಮ್ಮ ಚರಣಾಶ್ರಯವನ್ನು ಬಿಟ್ಟರೆ ಅವನಿಗೆ ಗತಿಯಿಲ್ಲ. ಆ ಹಾಳು ಯಜ್ಞಕ್ಕೆ ಹೋಗಿ ಸರ್ವನಾಶ ಮಾಡಬೇಡಿರಿ.

ವಶಿ—ವತ್ಸೇ, ರಕ್ಷಿಸತಕ್ಕದ್ದೂ ಆಶ್ರಯವನ್ನು ಕೊಡತಕ್ಕದ್ದೂ ಧರ್ಮವೊಂದೇ. ಆ ಧರ್ಮವನ್ನು ಬಿಟ್ಟರೆ ಪರಾಶರನಿಗೆ ಘೋರವಾದ ಅಮಂಗಳವಾಗುತ್ತದೆ. ನಾನು ಧರ್ಮಕ್ಕಾಗಿ ಯಜ್ಞಕ್ಕೆ ಹೋಗುತ್ತೇನೆ. ಧರ್ಮದ ಕೈಯಲ್ಲಿ ನಿಮ್ಮನ್ನಿಟ್ಟು ನಾನು ಯಜ್ಞಕ್ಕೆ ಹೋಗುತ್ತೇನೆ. ಧರ್ಮವೇ ನಿಮ್ಮ ಆಶ್ರಯದಾತಾ, ಧರ್ಮವೇ ನಿಮ್ಮನ್ನು ರಕ್ಷಿಸುತ್ತದೆ.

(ಪರಾಶರನ ಪ್ರವೇಶ)

ಅದೃ—(ಪರಾಶರನನ್ನು ನೋಡಿ) ಎಲಾ, ಅನಾಥ, ಎಲಾ ನಿರ್ಭಾಗ್ಯ, ನಿಮ್ಮ ತಾತನನ್ನು ಹಿಂದಿರುಗಿಸು, ನಮ್ಮ ಮಾತನ್ನು ಆತನು ಕಿವಿಗೆ ಹಾಕಿಕೊಳ್ಳುವುದಿಲ್ಲ. ನಿನ್ನ ಮಾತಿನಿಂದಾದರೂ ಹಿಂದಿರುಗುತ್ತಾನೋ ಏನೋ, ಅನಾಥನೆಂದು ದಯೆ ತೋರುತ್ತಾನೋ ಏನೋ, ನೋಡು.

ಪರಾ—ತಾತಾ, ತಾತಾ, ನಮ್ಮನ್ನು ಏಕೆ ಹೀಗೆ ಬಿಟ್ಟು ಬಿಡುತ್ತಿ ? ತಾಯಿಯ ಹೊಟ್ಟೆಯಲ್ಲಿದ್ದಾಗಲೇ ತಂದೆಯನ್ನು ಕಳೆದುಕೊಂಡೆ; ತಂದೆಯ ಮುಖವನ್ನು ಕಂಡು ಅರಿಯೆ. ಮಹಾ ತಪಸ್ವಿಗಳಾದ ಚಿಕ್ಕಪ್ಪನವರು ನಿರ್ಭಾಗ್ಯನಾದ ನಾನು ಹುಟ್ಟುವುದಕ್ಕೆ ಮೊದಲೇ ಈ ಲೋಕವನ್ನು ಬಿಟ್ಟರು. ನನಗೆ ತಂದೆಯೂ ನೀನೇ, ಚಿಕ್ಕಪ್ಪನೂ ನೀನೇ, ನಾನು ಹುಡುಗ, ನನ್ನನ್ನು ಶಿಕ್ಷಿಸತಕ್ಕ, ಪೋಷಿಸತಕ್ಕ ಎಲ್ಲಾ ಭಾರವೂ ನಿನ್ನದೇ. ಆ ಭಾರವನ್ನು ಯಾರಿಗೆ ಒಪ್ಪಿಸಿದೆ? ತಾತಾ, ನಿನ್ನನ್ನು ಬಿಟ್ಟರೆ ನನಗೆ ದಿಕ್ಕೇ ಇಲ್ಲ. ಈ ಸಂಸಾರಾರಣ್ಯದಲ್ಲಿ ನಿನ್ನನ್ನು ಕಳೆದುಕೊಂಡು ನಾನು ಹೇಗೆ ಜೀವಿಸಲಿ ? ತಂದೆಯಿಲ್ಲದವನೆಂದು ಎಂದೂ ನನ್ನ ಕಣ್ಣಿಗೆ ಮರೆಯಾಗದೆ ಇದ್ದೆ. ನಿನ್ನ ಪ್ರೇಮದಿಂದ ನಾನು ತಂದೆಯಿಲ್ಲದವನು ಎಂದು ಅಂದುಕೊಳ್ಳದಂತೆ ಮಾಡಿದ್ದೆ. ಇಂದು ಯಾಕೆ ನಿರ್ದಯನಾಗಿ ಬಿಟ್ಟು ಹೋಗುತ್ತಿ ?

ವಸಿ—ಪರಾಶರ, ಪರಾಶರ, ನನ್ನ ನಯನಾನಂದ, ಯಾಕೆ ಕ್ಷೋಭೆಪಡುತ್ತಿ ?

ಪರಾ—ಒಂದು ವೇಳೆ ನಾನು ಅಜ್ಞಾನವಶನಾಗಿ ತಮ್ಮ ಚರಣಗಳಲ್ಲಿ ಅಪರಾಧಿಯಾಗಿದ್ದರೂ ದುಃಖಿನಿಯಾದ ನನ್ನ ತಾಯಿಯು ಅಪರಾಧ ಮಾಡಿದವಳಲ್ಲ, ನನ್ನ ಅಜ್ಜಿಯು ತಮ್ಮ ಚರಣಾಶ್ರಿತಳು, ಅವರನ್ನೇಕೆ ಪರಿತ್ಯಾಗಮಾಡುತ್ತೀರಿ ? ತಾತಾ, ತಾತಾ, ನಾನೇನಾದರೂ ಅಪರಾಧಮಾಡಿದ್ದೇನೇನು ? ಅಜ್ಜಿ ಏನಾದರೂ ಅಪರಾಧ ಮಾಡಿದ್ದಾಳೇನು ? ಇಲ್ಲದೇ ಹೋದರೆ ಹತಭಾಗ್ಯಳಾದ ನನ್ನ ತಾಯಿಯು ಏನಾದರೂ ಅಪರಾಧಮಾಡಿದ್ದಾಳೇನು ? ಆದ್ದರಿಂದಲೇ ನಮಗೆ ಬುದ್ಧಿ ಕಲಿಸುವುದಕ್ಕಾಗಿ ನಿರಾಶ್ರಿತರನ್ನಾಗಿ ಮಾಡಿ ಹೊರಟು ಹೋಗುತ್ತೀರೇನು ? ತಾತಾ, ತಾತಾ, ನಾವು ತಮ್ಮ ಪಾದಸನ್ನಿಧಿಯಲ್ಲಿರಕೂಡದೆ ?

ವಸಿ—ವತ್ಸ, ನೀನು ಬಾಲಕನೇ ಹೌದು, ಆದರೆ ಯಜ್ಞೋಪವೀತವನ್ನು ಧರಿಸಿದ ಬ್ರಾಹ್ಮಣ. ಕರ್ತವ್ಯಪಾಲನೆಯೇ ಬ್ರಾಹ್ಮಣನ ಜೀವನ ; ಅಂಥಾ ಕರ್ತವ್ಯಪಾಲನೆಗಾಗಿಯೇ ನಿನ್ನ ತಾತನು ಹೊರಟಿರುವುದು. ಬ್ರಾಹ್ಮಣಜೀವನವು ಎಷ್ಟು ಕಠೋರತೆಯಿಂದ ತುಂಬಿದೆ ಎಂಬುದನ್ನು ಚೆನ್ನಾಗಿ ಗ್ರಹಿಸು. ಇತರ ವರ್ಣಗಳವರು ಬ್ರಾಹ್ಮಣರನ್ನು ಕಂಡು ಹೊಟ್ಟೆಕಿಚ್ಚು ಪಡುತ್ತಾರೆ. ಅವರಿಗೇನು ಗೊತ್ತು

ಎಂಥ ಮುಳ್ಳುಗಳಿಂದ ದಟ್ಟವಾದ ದಾರಿಯಲ್ಲಿ ಬ್ರಾಹ್ಮಣನು ಸಂಚರಿಸುತ್ತಾನೆಂಬುದು? ವಿರಾಮವಿಲ್ಲದ ಕಾರ್ಯ, ಆತ್ಮತ್ಯಾಗ ಕಾರ್ಯ, ಪರಹಿತಸಾಧನ ಕಾರ್ಯ—ಆ ಕಾರ್ಯದಲ್ಲಿ ಕಾಯ ಮನೋಪ್ರಾಣ ವಿಸರ್ಜನ-ಇದೇ ಬ್ರಾಹ್ಮಣನ ಆಜೀವನ ವ್ರತ.

ಪರಾ—ತಾತಾ, ಇಂಥಾ ಕಠೋರ ಈ ವಿಶ್ವಾಮಿತ್ರ! ಆತನಿಗೆ ಶಾಂತಿಯನ್ನು ಉಪದೇಶಮಾಡತಕ್ಕವರು ಯಾರೂ ಇಲ್ಲವೆ? ಆತನ ಕೌಶಲದಿಂದಲೇ ಅಪ್ಪನೂ ಚಿಕ್ಕಪ್ಪಂದಿರೂ ಮಡಿದರಂತೆ. ಸಾಲದುದಕ್ಕೆ ಇನ್ನು ನಿಮ್ಮನ್ನೂ ನಾಶಮಾಡಬೇಕೆಂದು ಹೊರಟಿದ್ದಾನೆ. ಈ ದುರಾಚಾರಿ ದಂಡನೀಯನಲ್ಲವೆ?

ವಸಿ—ವತ್ಸ, ಶಿಕ್ಷಿಸತಕ್ಕ ಭಾರ ನಮ್ಮದಲ್ಲ. ರೋಷಪರವಶನಾಗಿ ದೇಹದುರ್ಲಭವಾದ ಬ್ರಾಹ್ಮಣತ್ವವನ್ನು ಬಿಡಬೇಡ. ಬ್ರಾಹ್ಮಣನ ಬಲವೇ ಕ್ಷಮೆ. ಶಿಕ್ಷಿಸುವುದಲ್ಲ. ವತ್ಸ, ನಾನು ಹೊರಡುತ್ತೇನೆ.

(ಹೊರಡಲೆತ್ನಿಸುವನು)

(ವೇಗವಾಗಿ ಸುನೇತ್ರೆಯು ಬರುವಳು.)

ಸುನೇತ್ರಾ—ಪ್ರಭು, ಪ್ರಭು, ದಾಸಿಯ ಮೇಲೆ ಕರುಣವನ್ನು ತೋರಿಸಿರಿ. ಚಿರದುಃಖಿನಿಗೆ ಆಶ್ರಯವನ್ನು ಕೊಡಿರಿ. ಚರಣಾಶ್ರಿತಳಿಗೆ ಚರಣದಲ್ಲಿ ಸ್ಥಾನವನ್ನು ಕೊಡಿರಿ.

ವಸಿ—ತಾಯಿ, ನೀನು ಯಾರು ?

ಸುನೇ—ನಾನು, ಗಾಧಿರಾಜನ ಸತಿ, ವಿಶ್ವಾಮಿತ್ರನ ಹೆಂಡತಿ.

ವಸಿ—ನನ್ನ ಹತ್ತಿರ ಏನು ಕೆಲಸ, ತಾಯಿ ?

ಸುನೇ—ನನ್ನ ಸ್ವಾಮಿಯ ಮಂಗಳಾಕಾಂಕ್ಷೆ. ಸ್ವಾಮಿಗೆ ಬ್ರಹ್ಮಹತ್ಯ ಬರದಿರಲೆಂದು, ಪತಿಯ ಜೀವನ ವ್ಯಾಪಿಯಾದ ಕಠೋರ ತಪಸ್ಯೆಯು ನಿಷ್ಫಲವಾಗದಿರಲೆಂದು ತಮಗೆ ಶರಣಾಗತಳಾಗಿ ಬಂದಿದ್ದೇನೆ. ದಾಸಿಯಮೇಲೆ ಕೃಪೆಮಾಡಬೇಕು, ಯಜ್ಞಕ್ಕೆ ದಯ ಮಾಡ ಕೂಡದು.

ವಸಿ—ಅಮ್ಮಾ, ನಾನು ಪ್ರತಿಶ್ರುತ, ನನ್ನನ್ನು ಮಿಥ್ಯಾವಾದಿಯಾಗುವಂತೆ ಮಾಡುವುದಕ್ಕೆ ಯತ್ನಿಸಬೇಡ.

ಸುನೇ—ಪ್ರಭು, ಪ್ರಭು, ನನ್ನ ಸ್ವಾಮಿಯನ್ನು ಬ್ರಹ್ಮಹತ್ಯಬಾರದಂತೆ ರಕ್ಷಿಸಬೇಕು, ಸತಿಗೆ ಪತಿಭಿಕ್ಷೆಯನ್ನು ಕೊಡಬೇಕು.

ವಸಿ—ಶುಭೆ, ತಪಃ ಪ್ರಭಾವದಿಂದ ನಿನ್ನ ಪತಿಯು ದೇವರಕ್ಷಿತನಾಗಿದ್ದಾನೆ. ಆತನಿಗೆ ಅಮಂಗಳವಾಗುತ್ತೆಂದು ಯಾಕೆ ಭಯಪಡುತ್ತಿ ?

ಸುನೇ—ಪ್ರಭು, ಪ್ರಭು, ದಾಸಿಯೊಂದಿಗೆ ಯಾಕೆ ಕೋಪ ?

ಎಲ್ಲ, ಯಾವ ದೇವತೆ ಬ್ರಹ್ಮಘಾತಿಯನ್ನು ರಕ್ಷಿಸ ಬಲ್ಲವನು? ನನ್ನ ಎದುರಿಗೆ ಮಹಾ ಅಮಂಗಳ-ನನ್ನ ಸ್ವಾಮಿಯ ಇಷ್ಟ, ಬ್ರಹ್ಮವಧೆ, ಯಾವ ಬ್ರಾಹ್ಮಣ ಬ್ರಹ್ಮನ ಮುಖದಿಂದ ಹುಟ್ಟಿದನೋ, ಯಾವ ಬ್ರಾಹ್ಮಣನ ಪದಧೂಳಿಯನ್ನು ವಕ್ಷಸ್ಥಳದಲ್ಲಿ ಧರಿಸಿ ನಾರಾಯಣನು ಜ್ಞಾನಕ್ಕೆ ಗೌರವ ಕೊಟ್ಟನೋ, ಯಾವ ಬ್ರಾಹ್ಮಣನು ಬ್ರಹ್ಮಶಕ್ತಿ ಬಲದಿಂದ ದೇವಗಂಗೆಯನ್ನು ಆಪೋಶನವಾಗಿ ಕುಡಿದನೋ, ಸಮುದ್ರದ ನೀರನ್ನು ಬಿಂದುಜಲದಂತೆ ಶೋಷಿಸಿದನೋ, ಯಾವ ಬ್ರಾಹ್ಮಣನು ತ್ಯಾಗಶಕ್ತಿ ಬಲದಿಂದ ಇಂದ್ರನಿಗೆ ಸ್ವರ್ಗ ಸಿಕ್ಕಲೆಂದು ತನ್ನ ಮೂಳೆಯನ್ನು ಹುಲ್ಲು ಕಡ್ಡಿಯಂತೆ ಭಾವಿಸಿ ಕೊಟ್ಟನೋ, ಯಾವ ಬ್ರಾಹ್ಮಣನ ಕೃಪಾದೃಷ್ಟಿಗೆ ಪಾತ್ರನಾದರೆ ಮಹಾಪಾಪಿಯೂ ಪಾಪದಿಂದ ಮುಕ್ತನಾಗುತ್ತಾನೋ, ಅಂಥಾ ಬ್ರಾಹ್ಮಣನ ಮರಣ ಸಾಧನೆಗಾಗಿ ನನ್ನ ಪತಿಯು ಯಜ್ಞಕ್ಕೆ ಸಿದ್ಧಮಾಡಿಕೊಂಡಿರುವದು. ಪ್ರಭು, ಪ್ರಭು, ಅಮಂಗಳ ಇದಕ್ಕಿಂತ ಹೆಚ್ಚಿನದು ಯಾವುದು? ನನ್ನ ಪತಿಯನ್ನು ರಕ್ಷಿಸ ಬೇಕು.

ವಸಿ—ಸಾಧ್ವಿ, ಬ್ರಾಹ್ಮಣನ ಕೆಲಸಕ್ಕೆ ಯಾಕೆ ಅಡ್ಡಿ ಮಾಡುತ್ತಿ? (ಹೊರಡುವನು)

ಸುನೇ—ಇಲ್ಲ, ಪ್ರಭು, ಆ ಘೋರವಾದ ಯಜ್ಞಕ್ಕೆ ಹೋಗಲು ನಾನು ನಿಮ್ಮನ್ನು ಬಿಡುವುದಿಲ್ಲ. ನಾನು

ನಿಮ್ಮ ದಾರಿಗೆ ಅಡ್ಡವಾಗಿ ಬೀಳುತ್ತೇನೆ. ಈ ದಾಸಿಯನ್ನು ಕೊಂದು ತಾವು ಯಜ್ಞಕ್ಕೆ ದಯಮಾಡಬೇಕು.

(ವಸಿಷ್ಠನ ದಾರಿಗೆ ಅಡ್ಡವಾಗಿ ಬೀಳುವಳು.)

ವಸಿ—ಸಾಧ್ವಿ, ಮೇಲಕ್ಕೇಳು, ನಿನ್ನ ಪಾತಿವ್ರತ್ಯದ ಪ್ರಭಾವದಿಂದ ನಿನ್ನ ಪತಿಯು ಜಗತ್ಪೂಜ್ಯನಾಗುತ್ತಾನೆ.

ಸುನೇ—ಪ್ರಭು, ಅಬಲೆಯನ್ನು ವಂಚಿಸಬೇಡಿರಿ. ಹೇಳಿ, ನನ್ನ ಮನೋಭೀಷ್ಟವು ಪೂರ್ಣವಾಗುತ್ತದೆಯೆ ?

ವಸಿ—ಪತಿವ್ರತೆಯು ಮನೋಭೀಷ್ಟವನ್ನು ನಾರಾಯಣನು ಪೂರ್ಣ ಮಾಡುತ್ತಾನೆ.

(ಮುಂದೆ ವಸಿಷ್ಠ, ಆತನ ಹಿಂದೆ ಸುನೇತ್ರೆ ಹೊರಟು ಹೋಗುವರು.)

ಅದೃಶ್ಯಂತಿ—ಅಮ್ಮ, ನೀನೆಷ್ಟು ಕಠಿಣಳು, ಯಜ್ಞಕ್ಕೆ ಹೋಗುವುದನ್ನು ತಪ್ಪಿಸಲಿಲ್ಲ. ಅಪಾರಸಾಗರದಲ್ಲಿ ನಮ್ಮನ್ನೆಲ್ಲಾ ಮುಳುಗಿಸಿಬಿಟ್ಟೆ. ನಾವು ಆಶ್ರಯಹೀನರಾಗಿ ಹೇಗೆತಾನೇ ಜೀವನ ಧಾರಣೆ ಮಾಡೋಣ ! ನಮ್ಮ ಪರಾಶರನ ಗತಿಯೇನು ?

ಅರುಂಧತಿ—ಅಮ್ಮ, ನನ್ನನ್ನು ಯಾಕೆ ವೃಥಾ ನಿಂದಿಸುತ್ತಿ ? ನೀನು ಬ್ರಾಹ್ಮಣಕನ್ಯೆ, ಬ್ರಾಹ್ಮಣಪತ್ನಿ, ಬ್ರಾಹ್ಮಣಜನನಿ-ನೀನು ಬ್ರಾಹ್ಮಣಗೃಹದಲ್ಲಿ ಇದ್ದೂ

ಬ್ರಾಹ್ಮಣನ ಆಚಾರವನ್ನು ಅರಿತಿಲ್ಲವೆ? ನಾನು ಸಾಮಾನ್ಯ ಹೆಂಗಸು. ಅವರ ಪ್ರತಿಜ್ಞೆಯನ್ನು ಭಂಗ ಪಡಿಸತಕ್ಕ ಶಕ್ತಿ ನನಗೆಲ್ಲಿಯದು? ಕರುಣೆಯಲ್ಲಿ ಬ್ರಾಹ್ಮಣ ಕೋಮಲಹೃದಯ, ಆದರೆ ಪ್ರತಿಜ್ಞೆಯಲ್ಲಿ ಮೇರುವಿನಂತೆ ಅಚಲ. ಮೂರು ಲೋಕಗಳು ಒಟ್ಟುಗೂಡಿ ಪ್ರಭುವನ್ನು ತಡೆದರೂ, ಆತನು ಯಜ್ಞಕ್ಕೆ ಹೋಗುವುದನ್ನು ಬಿಡುವುದಿಲ್ಲ. ಬ್ರಹ್ಮ, ವಿಷ್ಣು, ಮಹೇಶ್ವರರು ಹೇಳಿದರೂ ಬ್ರಾಹ್ಮಣನು ಪ್ರತಿಜ್ಞೆಯನ್ನು ಬಿಡುವುದಿಲ್ಲ. ಬ್ರಾಹ್ಮಣನು ಸತ್ಯವಾದಿ, ಆತನ ಸತ್ಯವು ಭಂಗವಾಗುವುದು ಅಸಂಭವ, ವತ್ಸ ಪರಾಶರ, ಈ ಬಾಲ್ಯ ವಯಸ್ಸಿನಲ್ಲಿಯೂ ನೀನೇ ನಮಗೆ ಆಶ್ರಯ. ಅಮ್ಮ! ನೀನು ಬಾಲಕನ ಪರಿಚರ್ಯೆಯಲ್ಲಿ ತೊಡಗು, ಅತ್ತು ಫಲವೇನು?

ಪರಾ—ಅಮ್ಮಾ, ಬ್ರಾಹ್ಮಣನ ವಾಕ್ಯ ಹೀಗೆ ಅಚಲವಾದ ಪಕ್ಷದಲ್ಲಿ, ನಾನೂ ಬ್ರಾಹ್ಮಣ, ಗಾಯತ್ರಿ ನನಗೆ ಸಹಾಯ, ನಾನೂ ಪ್ರತಿಜ್ಞೆ ಮಾಡುತ್ತೇನೆ, ಗಾಯತ್ರೀದೇವಿಯ ಸಹಾಯದಿಂದ ನಾನು ವಿಶ್ವಾಮಿತ್ರನ ಆ ಮರಣಯಜ್ಞವನ್ನು ನಿಷ್ಫಲ ಮಾಡುತ್ತೇನೆ. ನಾನು ಆ ದೇವಿಯ ಉಪಾಸನೆಯಲ್ಲಿ ಪ್ರವೃತ್ತನಾಗುತ್ತೇನೆ.

(ಪರಾಶರನು ಹೋಗುವನು)

ಅದೃ—ಅಮ್ಮಾ ಅಮ್ಮಾ, ಪರಾಶರನು ಇನ್ನೇನು ಮಾಡುತ್ತಾನೋ! ಅವನೂ ಪ್ರತಿಜ್ಞೆಯಿಂದ ಬದ್ಧನಾಗು

ತ್ತಾನೇನು ? ಅದೃಷ್ಟದಲ್ಲಿ ಇನ್ನೇನಿದೆಯೋ ಗೊತ್ತಿಲ್ಲ.

ಅರುಂ—ಅಮ್ಮಾ ಚಿಂತಿಸಬೇಡ. ವೇದಮಾತೆಯಾದ ಗಾಯತ್ರಿಯೊಬ್ಬಳೇ ಬ್ರಾಹ್ಮಣನಿಗೆ ಸಹಾಯ. ಬಾಲಕನು ಆ ವೇದವಾದಿನಿಯ ಆಶ್ರಯವನ್ನು ಪಡೆಯುತ್ತಾನೆ. ಆದ್ದರಿಂದ ಅಮಂಗಳದ ಭಯವಿಲ್ಲ. ನಡೆ, ಹೋಗೋಣ.

(ಇಬ್ಬರೂ ಹೋಗುವರು)

## ೬. ಗರ್ಭಾಂಕ.

ವಿಶ್ವಾಮಿತ್ರನ ಯಜ್ಞಸ್ಥಾನ.

ವಿಶ್ವಾಮಿತ್ರ ಮತ್ತು ಬ್ರಾಹ್ಮಣರು.

ವಿಶ್ವಾ—ಸಭಾಸದರೆಲ್ಲರೂ ಕೇಳಿರಿ. ಸ್ವಯಂ ಲೋಕಪಿತಾಮಹನೇ ನನಗೆ ಬ್ರಹ್ಮರ್ಷಿತ್ವವನ್ನು ಕೊಟ್ಟರೂ ವಸಿಷ್ಠನು ನನ್ನಲ್ಲಿ ಬ್ರಾಹ್ಮಣಲಕ್ಷಣ ಕಂಡುಬರುವುದಿಲ್ಲವೆಂದು ಹೇಳಿದ. ನನ್ನಲ್ಲಿ ಯಾವ ವಿಷಯದಲ್ಲಿ ನ್ಯೂನತೆಯಿದೆ ಎಂಬುದನ್ನು ಪರೀಕ್ಷಿಸುವ ನಿಮಿತ್ತವಾಗಿ ನಾನು ಈ ಯಜ್ಞಕ್ಕೆ ಸಿದ್ಧಪಡಿಸಿಕೊಂಡಿರುವದು. ವಸಿಷ್ಠನು ಡಂಭದಿಂದ ಬ್ರಹ್ಮನ ವಾಕ್ಯವನ್ನು ಉಪೇಕ್ಷಿಸಿದನು. ಡಂಭದಿಂದಲೇ ಅವನ ಮರಣಯಜ್ಞದಲ್ಲಿ ಪೌರೋಹಿತ್ಯವನ್ನು ಸ್ವೀಕರಿಸಿ ನನ್ನ ಯಜ್ಞವನ್ನು ನಡೆಸುವುದಾಗಿ ಒಪ್ಪಿಕೊಂಡ. ಈ ದಿನ ಪರೀಕ್ಷೆ. ಆತನ ಬ್ರಾಹ್ಮಣತ್ವದ ತೇಜ

ಸ್ಸೆಷ್ಟು, ಆತನು ಯಾವ ತೇಜಸ್ಸಿನಿಂದ ಬ್ರಹ್ಮವಾಕ್ಯವನ್ನು ಉಪೇಕ್ಷೆಮಾಡಿದ ಎಂಬುದು ಗೊತ್ತಾಗುತ್ತದೆ.

ಬ್ರಾಹ್ಮಣ—ಮಹರ್ಷಿ, ನೀನು ಶಾಂತನಾಗು. ಬ್ರಾಹ್ಮಣನ ಮರಣಯಜ್ಞ ನಿನಗೆ ಉಚಿತವಲ್ಲ.

ವಿಶ್ವಾ—ನಾನು ಸರ್ವರ ಸಮಕ್ಷಮದಲ್ಲಿಯೂ ಹೇಳುತ್ತೇನೆ ಕೇಳಿ-ವಸಿಷ್ಠನು ಬಾರದೇ ಹೋದರೆ ನಾನು ಮರಣಯಜ್ಞವನ್ನು ನಿಲ್ಲಿಸುತ್ತೇನೆ. ಆದರೆ ವಸಿಷ್ಠ ಅಸತ್ಯವಾದಿ ಎಂಬುದನ್ನು ಮಾತ್ರ ಪ್ರಚಾರ ಮಾಡುತ್ತೇನೆ.

(ವಸಿಷ್ಠನ ಪ್ರವೇಶ.)

ವಸಿ—ಬ್ರಾಹ್ಮಣನು ಅಸತ್ಯವಾದಿಯಾಗುವುದಿಲ್ಲ. ನಾನು ನಿನ್ನ ಯಜ್ಞವನ್ನು ಸಾಂಗವಾಗಿ ನೆರವೇರಿಸುವುದಕ್ಕಾಗಿಯೇ ಬಂದಿದ್ದೇನೆ. ಹೋಮಾಗ್ನಿಯನ್ನು ಪ್ರಜ್ವಲನಮಾಡು, ನಾನು ಯಜ್ಞವನ್ನು ಮಾಡಿಸುತ್ತೇನೆ.

ಬ್ರಾಹ್ಮಣರು—ವಸಿಷ್ಠ, ವಸಿಷ್ಠ, ಉನ್ಮತ್ತನಾಗಬೇಡ. ವಿಶ್ವಾಮಿತ್ರನೊಂದಿಗೆ ಸದ್ಭಾವದಿಂದಿರು. ಬ್ರಹ್ಮನ ವಾಕ್ಯವನ್ನು ಯಾತಕ್ಕಾಗಿ ಉಪೇಕ್ಷೆಮಾಡುತ್ತಿ ?

ವಸಿ—ನಾನು ಬ್ರಹ್ಮನ ಮಾತನ್ನು ಉಪೇಕ್ಷಿಸುವುದಿಲ್ಲ, ಶಾಸ್ತ್ರ ಮರ್ಯಾದೆಯನ್ನು ಕಾಪಾಡುತ್ತೇನೆ.

ವಿಶ್ವಾ—ನಿನ್ನದೇ ಮರಣಯಜ್ಞ, ಜ್ಞಾಪಕವಿದೆಯೋ?

ವಸಿ—ನಾನು ಕರ್ತವ್ಯಪರಾಯಣ, ನಿನ್ನ ಪುರೋಹಿತ-ನಿನ್ನ ಯಜ್ಞವನ್ನು ಮಾಡಿಸುವುದಕ್ಕೋಸ್ಕರವೇ ಬಂದಿದ್ದೇನೆ.

(ಯಜ್ಞಕುಂಡದ ಎದುರಿಗೆ ಕುಳಿತುಕೊಳ್ಳುವನು)

ವಿಶ್ವಾ—(ಸ್ವಗತ) ಇವನೇನು ಹುಚ್ಚು ಬ್ರಾಹ್ಮಣ. ಅಥವಾ ಬ್ರಹ್ಮನು ಹೇಳಿದನೆಂಬುದು ಸುಳ್ಳು ಎಂದು ತಿಳಿದಿರಬಹುದೆ? ಇಲ್ಲದಿದ್ದರೆ, ತನ್ನ ಪ್ರಾಣವನ್ನೇ ಆಹುತಿ ಕೊಡಲು ಯಾವ ಸಾಹಸದಿಂದ ನನ್ನ ಯಜ್ಞಸ್ಥಾನಕ್ಕೆ ಬಂದಿದ್ದಾನು ?

ವಸಿ—ವಿಶ್ವಾಮಿತ್ರ, ಏನು ಯೋಚಿಸುತ್ತಿ ? ಹೋಮಾನಲ ಪ್ರಜ್ವಲಿತವಾಗಿದೆ, ಆಸನದಮೇಲೆ ಕುಳಿತುಕೊ.

ವಿಶ್ವಾ—ಹಾಗಾದರೆ ನೀನು ನನ್ನನ್ನು ಬ್ರಾಹ್ಮಣನೆಂದು ಸ್ವೀಕಾರ ಮಾಡುವುದಿಲ್ಲವೊ ?

ವಸಿ—ಬ್ರಾಹ್ಮಣನಾಗಿ ಅಶಾಸ್ತ್ರೀಯವಾದ ಕಾರ್ಯವನ್ನು ಹೇಗೆ ಮಾಡಲಿ? ಮಾತು ಖರ್ಚುಮಾಡಿದ್ದರಿಂದ ಪ್ರಯೋಜನವಿಲ್ಲ. ಯಜ್ಞವನ್ನು ಆರಂಭಿಸೋಣ.

ಬ್ರಾಹ್ಮಣರು—ಏಳಿರಿ, ಏಳಿರಿ, ಬ್ರಹ್ಮಹತ್ಯವನ್ನು ಯಾರು ನೋಡಿಯಾರು ?

ವಸಿ—ಬ್ರಾಹ್ಮಣರೆ, ನಾನು ಕೈ ಮುಗಿದು ವಿಜ್ಞಾಪಿಸಿ

ಕೊಳ್ಳುತ್ತೇನೆ-ಎಲ್ಲರೂ ನನ್ನನ್ನು ಬ್ರಾಹ್ಮಣನ ಸಮಾಜದ ಮುಖ್ಯಸ್ಥನೆಂದು ಒಪ್ಪಿಕೊಂಡಿದಾರೆ-ನನ್ನ ನಿರ್ಬಂಧವಿದೆ, "ಯಜ್ಞಕಾಲದಲ್ಲಿ ನೀವು ಇಲ್ಲಿ ಕುಳಿತಿರಬೇಕು, ಎಂದು" ತಮ್ಮ ಆಶೀರ್ವಾದದಿಂದ ಬ್ರಾಣನಮಾನ, ಬ್ರಾಹ್ಮಣನ ಪ್ರತಿಜ್ಞೆಯನ್ನು ಉಳಿಸುವುದಕ್ಕೆ ಸಮರ್ಥನಾಗುತ್ತೇನೆ.

ವಿಶ್ವಾ—ಇದೇನು ಚಮತ್ಕಾರ! ಪ್ರಾಣವನ್ನು ಹುಲ್ಲುಕಡ್ಡಿಯಂತೆ ಉಪೇಕ್ಷೆಮಾಡಿ ತನ್ನ ಸಂಹಾರಕ್ಕೆ ತಾನೇ ಮುಂದುವರಿದಿದ್ದಾನೆ. ಇಂಥಾ ತೇಜಸ್ಸನ್ನು ಈ ಬ್ರಾಹ್ಮಣನು ಎಲ್ಲಿ ಸಂಪಾದಿಸಿರಬಹುದು? ಮರಣೋನ್ಮುಖನಾಗಿದ್ದಾನೆ, ಎಳ್ಳಷ್ಟೂ ವಿಚಲಿತನಾಗಿಲ್ಲ! ಇದೇ ಬ್ರಾಹ್ಮಣತ್ವವಾದರೆ ಇದು ಅತ್ಯದ್ಭುತ ಪರಿಚಯ! ನನ್ನ ಹೃದಯದಲ್ಲಿ ಇಂಥ ಬಲವಿಲ್ಲ-ನಿಷ್ಕಾರಣವಾಗಿ ತನ್ನ ಮುಂಡವನ್ನು ಆಹುತಿ ಕೊಡುವುದರಲ್ಲಿ! ಅದ್ಭುತ, ಅದ್ಭುತ!

ವಸಿ—ವಿಶ್ವಾಮಿತ್ರ, ಆಸನದಮೇಲೆ ಕುಳಿತುಕೊ.

(ವಿಶ್ವಾಮಿತ್ರನು ಕೂಡುವನು)

ಹೇ ಸರ್ವಭುಕ್, ನನ್ನ ಯಜಮಾನನ ಮನೋಭೀಷ್ಟವನ್ನು ಪೂರ್ಣಮಾಡು. ಬ್ರಹ್ಮನ ವಾಕ್ಯವನ್ನು ಕಾಪಾಡು. ವಸಿಷ್ಠನಿಧನಾಯ ಸ್ವಾಹಾ!

(ಯಜ್ಞಕುಂಡದಲ್ಲಿ ಒಂದನೆಯ ಆಹುತಿಯನ್ನು ಹಾಕುವನು.)

ವಿಶ್ವಾ—ವಸಿಷ್ಠ, ಸ್ಥಿರನಾಗು. (ಸ್ವಗತ) ಹುಚ್ಚ ಬ್ರಾಹ್ಮಣ! ಹುಚ್ಚನಲ್ಲದೆ ಯಾವನು ತಾನೆ ಸ್ವೇಚ್ಛೆಯಿಂದ ಆತ್ಮಘಾತಿಯಾಗುತ್ತಾನೆ! ತನ್ನ ಮರಣ ಯಜ್ಞವನ್ನು ಪೂರ್ಣಮಾಡುವುದರಲ್ಲಿ ಉದ್ಯುಕ್ತನಾಗಿದ್ದಾನೆ; ಇದಕ್ಕಿಂತಲೂ ಹೆಚ್ಚಿನ ಉನ್ಮಾದ ಲಕ್ಷಣ ವಾವುದು? ಅರಳಿದ ಮುಖ, ಏನು ಪ್ರಕಾಶಮಾನವಾಗಿದೆ! ತೇಜೋರಾಶಿ, ಮುಖಮಂಡಲದಲ್ಲಿ ಹೋಮಾಗ್ನಿಗೆ ಸದೃಶವಾದ ಜ್ಯೋತಿ! ಹುಚ್ಚಿನಿಂದ ಈ ಕಾಂತಿ ಇರಬಹುದೆ! ಹಿತಾಹಿತ ಜ್ಞಾನವೇ ಇರುವ ಹಾಗಿಲ್ಲ! ನಿಜವಾಗಿಯೂ ನನ್ನ ಹಿತಾಕಾಂಕ್ಷಿಯಾದ ಪುರೋಹಿತನ ಹಾಗೆ ಏಕಾಗ್ರತೆಯಿಂದ ಆಹುತಿಯನ್ನು ಹಾಕಿದ. ಇದು ಹುಚ್ಚಲ್ಲದಿದ್ದರೆ ಹುಚ್ಚನ ಲಕ್ಷಣವಿನ್ನಾವುದು? ಈ ಹುಚ್ಚನನ್ನು ಕೊಂದು ಫಲವಿಲ್ಲ. ಜಪತಪ ಎಲ್ಲ ನಿಷ್ಫಲ. ಈ ಹುಚ್ಚನ ಕಾರಣದಿಂದ, ಬ್ರಹ್ಮನ ವಾಕ್ಯವೂ ಕೂಡ ನಿಷ್ಫಲವಾಯಿತು. ನನ್ನ ಕರ್ಮಫಲ, ಇದರಲ್ಲಿ ಯಾರ ದೋಷವೂ ಇಲ್ಲ. ಆದದ್ದಾಯಿತು. ಈ ಉನ್ಮಾದ ವಧೆಯಿಂದ ಪ್ರಯೋಜನವಿಲ್ಲ.

ವಸಿ—ವಿಶ್ವಾಮಿತ್ರ, ನಾನು ಯಾವಾಗ ನಿನ್ನ ಪೌರೋಹಿತ್ಯವನ್ನು ಒಪ್ಪಿಕೊಂಡೆನೋ ಆಗ ನೀನು ಬೇಡವೆಂದರೂ ನಾನು ನಿನ್ನ ಯಜ್ಞವನ್ನು ಪೂರೈಸುತ್ತೇನೆ. ಯೋಚನೆಯನ್ನು ಬಿಡು. ಏಕೆ ಸಾವಕಾಶ?

ವಿಶ್ವಾ—ದಂಭ, ದಂಭ! ಹುಚ್ಚಿಲ್ಲ. ಬ್ರಹ್ಮನ ಮಾತಿ

ನಲ್ಲಿ ಅಪನಂಬಿಕೆ! ಹಾಕು ಆಹುತಿ.

ವಸಿ—ವಸಿಷ್ಠನಿಧನಾಯ ಸ್ವಾಹಾ.

(ಯಜ್ಞಕುಂಡದಲ್ಲಿ ೨ನೆಯ ಆಹುತಿಯನ್ನು ಹಾಕು ವನು)

ವಿಶ್ವಾ—(ಸ್ವಗತಂ) ನಿಜವಾಗಿಯೂ ಹುಚ್ಚಿರಬಹುದೆ! ಹುಚ್ಚೋ ದಂಭವೋ ಒಂದೂ ಗೊತ್ತಾಗದು. ಯಾವುದಾದರೂ ಆಗಲಿ, ಈ ಬ್ರಾಹ್ಮಣನು ಆಹುತಿ ಕೊಡುವುದನ್ನು ನಿಲ್ಲಿಸುತ್ತೇನೆ. (ಪ್ರಕಾಶವಾಗಿ) ಈಗಲೂ ಯೋಚನೆ ಮಾಡು. ನಾನು ಪ್ರಮಾಣವಾಗಿ ಹೇಳುತ್ತೇನೆ, ನನಗೆ ಬ್ರಹ್ಮನು ವರವನ್ನು ಕೊಟ್ಟಿದ್ದಾನೆ. ಬ್ರಹ್ಮನ ಮಾತು ನಿಷ್ಫಲವಾಗುವುದಿಲ್ಲ. ಈ ಮೂರನೆಯ ಆಹುತಿಯನ್ನು ಹಾಕಿದರೆ ನಿನ್ನ ಮುಂಡ ಕುತ್ತಿಗೆಯಿಂದ ಕಳಚಿ ಬೀಳುತ್ತದೆ.

ವಸಿ—ನಾನು ನಿನ್ನ ಪೌರೋಹಿತ್ಯವ್ರತವನ್ನು ಕೈಕೊಂಡಿದ್ದೇನೆ. ನಿನ್ನ ಯಜ್ಞವನ್ನು ಪೂರ್ಣಮಾಡುವುದೇ ನನ್ನ ಕರ್ತವ್ಯ. ಈ ಮೂರನೆಯ ಆಹುತಿಯನ್ನು ಹಾಕಿದ ಮೇಲೆಯೇ ನಿನ್ನ ಯಜ್ಞ ಪೂರ್ಣವಾಗುವುದು.

ವಿಶ್ವಾ—ಸ್ಥಿರನಾಗು. ಇದೇನು, ಇದೇನು, ಕಾಣುವುದು ಇದಾವ ಪ್ರಪಂಚ! ಬ್ರಾಹ್ಮಣನು ಅಚಲನಾಗಿ ಮೇರು ಸಮಾನನಾಗಿ ಕಾಣುತ್ತಾನೆ. ಯಾವ ಮಹಾ ಪ್ರಭಾವದಿಂದ ಇಂಥಾ ಮಹಾ ಆತ್ಮತ್ಯಾಗ! ಈ

ಮಾಹಾತ್ಮ್ಯವು ನನ್ನಲ್ಲಿಲ್ಲ. ಇಂಥ ಕೆಲಸ ಮಾಡುವುದಕ್ಕೆ ನನ್ನ ಕೈಲಿ ಸಾಧ್ಯವಿಲ್ಲ! ಪ್ರಾಣವಧೆಗಾಗಿ ಯಜ್ಞಮಾಡುತ್ತೇನೆ, ಈತನಲ್ಲಿ ರೋಷದ ಲಕ್ಷಣವಿಲ್ಲ. ಹಿಂದು ಮುಂದು ನೋಡದೆ ಆಹುತಿಯನ್ನು ಹಾಕಲು ಸಿದ್ಧನಾಗಿದ್ದಾನೆ, ಜಗದಂಬೆ, ಗೊತ್ತಾಯಿತು ನನ್ನಲ್ಲಿ ಏನು ಕಡಮೆಯಾಗಿದೆ ಎಂಬುದು. ನನ್ನ ಹೃದಯ ಕ್ಷಮಾಹೀನ, ಕಠೋರ. ಮಹಾಮಾಯೆ? ನಿನ್ನ ಮಾಯೆ ಮಹಾಘೋರ, (ಅತ್ಯಂತ) ನಿಬಿಡ. ತಪೋಬಲದಿಂದ ಘೋರ ತಮಸ್ಸು ಹೋಗುವುದಿಲ್ಲ. ರೋಷವಶನಾಗಿ ರಂಭೆಗೆ ಶಾಪಕೊಟ್ಟೆ. ಪುನಃ ಬ್ರಾಹ್ಮಣ ವಧೆಗೆ ಸಿದ್ಧನಾಗಿದ್ದೇನೆ. ನನ್ನ ತಪಸ್ಸಿಗೆ ಧಿಕ್ಕಾರವಿರಲಿ. ರಾಜರ್ಷಿತ್ವ, ಮಹರ್ಷಿತ್ವವನ್ನು ಪಡೆದದ್ದಕ್ಕೂ ಧಿಕ್ಕಾರವಿರಲಿ. ಬ್ರಹ್ಮರ್ಷಿತ್ವವನ್ನು ಪಡೆಯಬೇಕೆಂಬ ಆಕಾಂಕ್ಷೆಗೆ ಶತಧಿಕ್ಕಾರವಿರಲಿ. ಕ್ರೋಧನಸ್ವಭಾವ, ಚಂಡಾಲತ್ವವನ್ನು ಆಶ್ರಯಿಸಿದೆ. ಬ್ರಾಹ್ಮಣನ ಪದರೇಣುವನ್ನು ಗ್ರಹಣಮಾಡುವುದಕ್ಕೆ ಕೂಡ ನಾನು ಯೋಗ್ಯನಲ್ಲ. ಬ್ರಾಹ್ಮಣೋತ್ತಮ, ಕ್ಷಮಿಸು, ಆಹುತಿ ಪ್ರದಾನವನ್ನು ನಿಲ್ಲಿಸು.

ವಸಿ—ಆಹುತಿಯನ್ನು ಕೈಗೆ ತೆಗೆದು ಕೊಂಡಿದೇನೆ. ಅದೆಂದಿಗೂ ನಿಷ್ಫಲವಾಗುವುದಿಲ್ಲ. ಆಹುತಿಗಾಗಿ ಅಗ್ನಿದೇವತೆಯ ಕರಾಳ ಜಿಹ್ವೆಯು ಆಶಿಸುತ್ತಿದೆ. ಆಹುತಿಯನ್ನು ಹಾಕದೆ ಇರುವುದು ಹೇಗೆ?

ವಿಶ್ವಾ—ನನ್ನ ಯಥಾರ್ಥವಾಗಿ ಆಹುತಿಯನ್ನು ಹಾಕು. ಆಶೀರ್ವಾದ ಮಾಡು, ಮರಣದಿಂದ ನನ್ನ ಚಂಡಾಲತ್ವವು ಹೋಗಲೆಂದು. ಬ್ರಾಹ್ಮಣೋತ್ತಮ, ಕೃಪೆಯಿಂದ ಈ ಅಧಮ ಸೇವಕನನ್ನು ಕ್ಷಮಿಸು. ನಿನ್ನ ಮಾಹಾತ್ಮ್ಯೆಯು ನನಗೆ ಗೊತ್ತಿರಲಿಲ್ಲ. ಅಜ್ಞಾನದಿಂದ ಅಧಮನಾದ ನನಗೆ ಯಜ್ಞಸೂತ್ರಧಾರಿಯಾದ ಬ್ರಾಹ್ಮಣನು ದೇವದೇವನೆಂಬುದು ಗೊತ್ತಾಗಲಿಲ್ಲ. ಪ್ರಾಯಶ್ಚಿತ್ತರೂಪವಾಗಿ ನನ್ನ ಮಸ್ತಕವನ್ನು ಆಹುತಿಯಾಗಿ ಸಮರ್ಪಿಸುತ್ತೇನೆ. ಆಹುತಿಯ ಪ್ರಭಾವದಿಂದ ನನ್ನ ತಲೆ ಒಡೆದು ಎರಡು ಹೋಳಾಗಲಿ. ಆಹುತಿಯನ್ನು ಹಾಕು, ಹಾಕು, ಏಕೆ ಸುಮ್ಮನಿದ್ದಿ ?

ವಸಿ—ನಾನು ನಿನ್ನ ಪುರೋಹಿತ, ಅಹಿತಸಾಧನೆಗಾಗಿ ಬಂದಿಲ್ಲ.

ವಿಶ್ವಾ—ಪಾಪಿ ಯಜ್ಞಾನಲನು ನಿರ್ವಾಣವಾಗಲಿ.

(ನೀರು ಹಾಕಿ ಅಗ್ನಿಯನ್ನು ಆರಿಸುವನು)

ವಸಿಷ್ಠದೇವ, ಬ್ರಹ್ಮನ ಮಾತಿನಿಂದಲೂ ನನಗೆ ಬ್ರಾಹ್ಮಣತ್ವ ಲಭಿಸಲಿಲ್ಲ. ನಿನ್ನ ಕೃಪೆಯಿಂದ ನನ್ನ ಮನಸ್ಸಿನ ಅಜ್ಞಾನವು ನನಗೆ ಗೊತ್ತಾಯಿತು. ನಾನು ಕ್ರೋಧನ ಸ್ವಭಾವದವನು. ನನಗೆ ಕ್ಷಮಾಗುಣವನ್ನು ಕಲಿಸು.

ವಸಿ—ಶಾಬಾಸ್, ಶಾಬಾಸ್, ನೀನು ಪರಮ ಕ್ಷಮಾಶೀಲ, ನಿನ್ನ ಹತ್ತಿರವೇ ಜಗತ್ತು ಕ್ಷಮಾಗುಣವನ್ನು

ಕಲಿಯಬೇಕು. ಬ್ರಹ್ಮರ್ಷಿ, ನನ್ನ ನಮಸ್ಕಾರವನ್ನು ಗ್ರಹಣಮಾಡು.

ವಿಶ್ವಾ—ನಮಸ್ಕಾರ! ಇದೇನು, ನೀನು ನನ್ನ ಬ್ರಾಹ್ಮಣತ್ವವನ್ನು ಒಪ್ಪಿಕೊಂಡೆಯಾ?

ವಸಿ—ಅವಶ್ಯವಾಗಿ ಒಪ್ಪಿಕೊಳ್ಳುತ್ತೇನೆ. ನೀನು ಪರಮ ತಿತಿಕ್ಷಾಶೀಲ ಬ್ರಾಹ್ಮಣ. ಪವಿತ್ರವಾದ ಬ್ರಹ್ಮಣ್ಯ ತೇಜಸ್ಸಿನಿಂದ ನಿನ್ನ ಮುಖಮಂಡಲವು ಪ್ರಕಾಶಿಸುತ್ತದೆ. ಬ್ರಹ್ಮರ್ಷಿತ್ವವನ್ನು ಸಂಪಾದಿಸುವುದಕ್ಕಾಗಿ ನೀನು ಕಠೋರ ತಪಸ್ಸನ್ನು ಮಾಡಿದೆ. ನಾನು ನಿನ್ನ ಬ್ರಾಹ್ಮಣತ್ವವನ್ನು ಒಪ್ಪಿಕೊಳ್ಳದ್ದರಿಂದ ನೀನು ಬ್ರಹ್ಮನಲ್ಲಿ ವರ ಪಡೆದದ್ದು ನಿಷ್ಫಲವಾಯಿತು. ನಾನು ನಿನ್ನ ಪರಮಶತ್ರು, ನಿನ್ನ ಇಷ್ಟಾರ್ಥಕ್ಕೆ ಪ್ರತಿಬಂಧಕ. ಮೂರನೇ ಆಹುತಿಯಿಂದ ನನ್ನ ತಲೆ ಕಳಚಿ ಬೀಳುತ್ತಿದ್ದದ್ದು ನಿಶ್ಚಯ. ಆದರೆ ನೀನು ಮಹಾ ಕ್ಷಮಾಶೀಲ, ಹೀಗೆ ನಿನ್ನ ಪರಮ ಶತ್ರುವನ್ನು ಸಂಹರಿಸುವುದಕ್ಕೆ ಶಕ್ತಿಯನ್ನು ಪಡೆದಿದ್ದರೂ ಬ್ರಾಹ್ಮಣ ಭೂಷಣವಾದ ತಿತಿಕ್ಷಾಗುಣದಿಂದ ಕ್ಷಮಿಸಿದೆ. ನೀನು ರಾಜರ್ಷಿ, ಮಹರ್ಷಿ, ಬ್ರಹ್ಮರ್ಷಿ, ನನಗೆ ಪ್ರಣಮ್ಯ.

ವಿಶ್ವಾ—ವಸಿಷ್ಠ, ವಸಿಷ್ಠ, ನೀನು ನನ್ನ ಗುರು, ನೀನು ನನ್ನ ಕಣ್ಣನ್ನು ತೆರೆದೆ. ನನಗೆ ಇಷ್ಟು ದಿನವೂ ಗೊತ್ತಿರಲಿಲ್ಲ-ಅಭಿಮಾನ ತ್ಯಾಗವೇ ಬ್ರಾಹ್ಮಣತ್ವವೆಂ

ಬುದು. ನಾನು ಘೋರತಪೋಭಿಮಾನಿಯಾಗಿದ್ದೆ, ಈ ದಿನ ನಿನ್ನ ಕೃಪೆಯಿಂದ ಆ ಅಭಿಮಾನವು ದೂರ ವಾಯಿತು. ನನಗೆ ನಿನ್ನ ಪಾದಧೂಳಿಯನ್ನು ಅನು ಗ್ರಹಿಸು.

ವಸಿ—ವಿಶ್ವಾಮಿತ್ರ, ನೀನು ನನ್ನ ಸ್ನೇಹಿತ, ನನ್ನನ್ನು ಆಲಿಂಗಿಸು. ನೀನು ಮಹಾ ತಪಸ್ವಿ, ನಾನು ನಿನಗೆ ಪಾದ ಧೂಳಿಯನ್ನು ಕೊಡಲು ಯೋಗ್ಯನಲ್ಲ.

ಬ್ರಾಹ್ಮಣರು—ಜಯವಾಗಲಿ, ಬ್ರಹ್ಮರ್ಷಿ ವಿಶ್ವಾಮಿ ತ್ರನಿಗೆ ಜಯವಾಗಲಿ.

(ಪ್ರವೇಶ-ಬ್ರಹ್ಮಣ್ಯ ದೇವ.)

ಬ್ರಹ್ಮಣ್ಯ—ವಿಶ್ವಾಮಿತ್ರ, ನಿನಗೆ ನನ್ನ ಗುರುತು ಸಿಕ್ಕಿ ತೆ ?

ವಿಶ್ವಾ—ಹೌದು, ಪ್ರಭು,

ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿ
ತಾಯಚ |
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ
ನಮಃ ||

(ಪ್ರವೇಶ ವೇದಮಾತಾ)

ವೇದ—ವಿಶ್ವಾಮಿತ್ರ, ನಾನು ನಿನ್ನ ಹತ್ತಿರ ಯಾವಾಗ ಲೂ ಇರುವುದಕ್ಕಾಗಿ ಬಂದಿದ್ದೇನೆ.

ವಿಶ್ವಾ—ಅಮ್ಮ; ಬ್ರಹ್ಮವಾದಿನಿ, ಇಷ್ಟು ದಿನಕ್ಕೆ ಪ್ರಸ ನ್ನಳಾದೆಯಾ ?

ವೇದ—ನಾನು ಕೊಡುವ ಈ ಯಜ್ಞಸೂತ್ರವನ್ನು ಧಾರಣಮಾಡು.

(ವಿಶ್ವಾಮಿತ್ರನ ಕುತ್ತಿಗೆಗೆ ಯಜ್ಞೋಪವೀತವನ್ನು ಹಾಕುವಳು.)

(ಪ್ರವೇಶ-ಸುನೇತ್ರೆ)

ಸುನೇತ್ರೆ—ಅಮ್ಮಾ ಅಮ್ಮಾ, ವಿಶ್ವಜನನಿ, ಮಗಳಲ್ಲಿ ನಿನಗೆ ಅಪಾರವಾದ ಸ್ನೇಹ !

ವೇದ—ಅಮ್ಮಾ ನಿನ್ನ ಪತಿಯು ತಪಸ್ವಿ. ಪತಿಪತ್ನೀ ಸಂಬಂಧವನ್ನು ಬಿಟ್ಟು, ತಪಸ್ವಿನೀ ಭಾವದಿಂದ ವರ್ತಿಸು.

(ಪ್ರವೇಶ-ಸದಾನಂದ)

ಸದಾ—ಬ್ರಾಹ್ಮಣೇಭ್ಯೋನಮಃ, ರಾಜಾ, ನಾನು ಬಂದಿದ್ದೇನೆ. ಈ ಹುಡುಗಿ ಮತ್ತು ಇದೇ ಹುಡುಗ ಗೊತ್ತಾಯಿತು ನೀನು ಲಾಡು ಚಿರೋಟಿ ಎದುರಿಗೆ ಈಗ ತಂದಿಡು, ನಾಲಿಗೆಯಲ್ಲಿ ನೀರೂರುವುದೇ ಇಲ್ಲ.

ವಿಶ್ವಾ—ಮಿತ್ರಾ, ಮಿತ್ರಾ, ಹಿತೈಷಿ ಬ್ರಾಹ್ಮಣ. (ಸದಾನಂದನನ್ನು ಆಲಿಂಗಿಸುವನು) ಹೇ ಮಾನವ, ದೇವ ದ್ವಿಜ ಕೃಪೆಯಿಂದ ಬ್ರಹ್ಮರ್ಷಿತ್ವವನ್ನು ಪಡೆದೆನು. ನನ್ನ ಅಭೀಷ್ಟವು ಪೂರ್ಣವಾಯಿತು. ನನ್ನ ಅಭೀಷ್ಟವು ಮನುಷ್ಯನಿಗೆ ದುರ್ಲಭವಾದುದು. ಜಾತಿಯು ಯಾವುದಾದರೂ ಆಗಲಿ, ತಪೋಬಲದಿಂದ ಮನುಷ್ಯನು ಉಚ್ಚಪದವನ್ನು ಹೊಂದುವನು. ಜೀ

ವನದಲ್ಲಿ ತಪಸ್ಸು ದೃಢವಾದ ಸಹಾಯ. ಅದರ ಪ್ರಭಾವದಿಂದ ನೀಚಸಂಸ್ಕಾರವು ನಾಶವಾಗುತ್ತದೆ. ಆತ್ಮಜ್ಞಾನವೂ ಹುಟ್ಟುವುದು. ಹುಟ್ಟು ಸಾವಿನ ಭ್ರಮೆಯು ತೊಲಗುವುದು. ತಪಸ್ಸೇ ಸಂಪತ್ತು, ಅದೇ ಉಚ್ಚ ಪದವಿಯನ್ನು ಕೊಡುವುದು. ಬೇಡಿದವರಿಗೆ ಕೋರಿದ್ದನ್ನು ಕೊಡುವುದು. ತಪಸ್ಸಿಗೆ ಸಾಧ್ಯ ಅಸಾಧ್ಯವೆಂಬ ವಿಚಾರವೇ ಇಲ್ಲ. ತಪಸ್ಸು ಎಲ್ಲದರ ಮೇಲೆಯೂ ಅಧಿಕಾರ ಮಾಡಬಲ್ಲುದು. ತಪೋಬಲದಿಂದ ಹೀನ ಜನರೂ ಅತ್ಯುಚ್ಚ ಪದವಿಯನ್ನು ಹೊಂದಬಲ್ಲರು. ತಪಸ್ವಿಗಳನ್ನು ದೇವಮಾತೆಯು ಮುಡಿಲಲ್ಲಿಟ್ಟು ಸಲಹುವಳು. ಬ್ರಹ್ಮಣ್ಯದೇವನು ಅವರ ಹೃದಯದಲ್ಲಿಯೇ ವಿಹರಿಸುವನು. ಮಾನವರೆ! ತಪಸ್ಸಿನ ಪ್ರಭಾವವನ್ನು ತಿಳಿಯಿರಿ. ನನ್ನ ಉಪದೇಶವನ್ನು ತೆಗೆದುಕೊಂಡು ನೀವು ನಡೆದರೆ ನನ್ನ ಜೀವನವು ಸಫಲ.

(ದೇವತೆಗಳೂ ಅಪ್ಸರ ಸ್ತ್ರೀಯರೂ ಬರುವರು.)

ಒಟ್ಟುಗೂಡಿ ಮಂಗಳವನ್ನು ಹಾಡುವರು.

---

**ಕೊನೆಗಂಡಿತು.**

---